# ಅಪರಂಜಿ

ಅಕ್ಟೋಬರ್
1990

ತಿಳಿನಗೆಯ ಕಾರಂಜಿ

ಜನ್ಮದಿನೋತ್ಸವ ಸಂಚಿಕೆ



- ಪ್ರಕಾಶ್
- ಜಿ. ಎಸ್. ಜಿ.
- ದುರ್ವಿನೀತ
- ನಾ. ಡಿಸೋಜ
- ಶಾಂತಾ ರಘು
- ಅ. ರಾ. ಸೇ.
- ಹೆಚ್. ಎಲ್. ಕೇಶವಮೂರ್ತಿ
- ಶೀನೂ
- ಶಿವು

ಬಿಡಿ ಪ್ರತಿ : 2 ರೂ. 50 ಪೈ.

# ಅಪರಂಜಿ

ಅಕ್ಟೋಬರ್
1990

ತಿಳಿನಗೆಯ ಕಾರಂಜಿ

**ಜನ್ಮದಿನೋತ್ಸವ ಸಂಚಿಕೆ**

- ಪ್ರಕಾಶ್
- ಜಿ. ಎನ್. ಜಿ.
- ದುರ್ವನೀತ
- ನಾ. ಡಿಸೋಜ
- [illegible]
- ಅ. ರಾ. ಸೇ.
- ಎಚ್. ಎಲ್. ಕೇಶವಮೂರ್ತಿ
- [illegible]
- [illegible]

**ಬಿಡಿ ಪ್ರತಿ : 2 ರೂ. 50 ಪೈ.**




(ತಿಳಿ ನಗೆಯ ಕಾರಂಜಿ)

ಸಂಪುಟ ೮ ಅಕ್ಟೋಬರ್ ೧೯೮೦ ಸಂಚಿಕೆ-೧

ಅಪರಂಜಿ ಏಳು ತುಂಬಿ ಎಂಟಕ್ಕೆ ಮುಗ್ಗರಿಸಿದ್ದಾಳೆ. 'ದಂಟು' ಅನ್ನಲು ಇನ್ನೂ ಒಂದು ವರ್ಷ ಬೇಕು. ಅಷ್ಟು ಹೊತ್ತಿಗೆ ಅದನ್ನೇ ಅರಸುವಂತೆ ಆಗದೆ, ಓದುಗರ ಮನೆ ಮನಗಳನ್ನು ಮುದದಿಂದ ತುಂಬುವ ಕೆಲಸದಲ್ಲಿ ಯಶಸ್ಸು ಸಿಗಲಿ ಎಂದು ಆಕೆ ಭಗವಂತನಲ್ಲಿ ತಲೆಬಾಗಿ ಪ್ರಾರ್ಥಿಸುತ್ತಾಳೆ.


| | | |
|---|---|---|
| ಗೌರವ ಸಲಹೆಗಾರರು :<br>ಶ್ರೀ ಅ. ರಾ. ಸೇ.<br>ಶ್ರೀ ಶೇಷಗಿರಿ<br><br>ಸಂಪಾದಕ :<br>**ಶಿವಕುಮಾರ್** | ಚಂದಾ ವಿವರ :<br>ಬಿಡಿ ಪ್ರತಿ :<br>2 ರೂ. 50 ಪೈ.<br>ವಾರ್ಷಿಕ ಚಂದಾ :<br>25 ರೂ.<br>ಆಜೀವ ಚಂದಾ :<br>250 ರೂ. | ವಿಳಾಸ :<br>ಅಪರಂಜಿ ಕಾರ್ಯಾಲಯ<br>36, 6ನೆಯ ಮುಖ್ಯ ರಸ್ತೆ<br>ಮಲ್ಲೇಶ್ವರಂ<br>ಬೆಂಗಳೂರು 560003<br>ಕೆಲಸದ ವೇಳೆ :<br>ಬೆಳಗ್ಗೆ 8ರಿಂದ 10ರವರೆಗೆ ಮಾತ್ರ. |

ಈ ಸಂಚಿಕೆಯಲ್ಲಿ



ಮುದ್ರಣ : ಇಂಪ್ರೆಷನ್ಸ್, ಮಲ್ಲೇಶ್ವರಂ, ಬೆಂಗಳೂರು

ದೂರವಾಣಿ : 342144

# ಅಪರಂಜಿ

(ತಿಳಿನಗೆಯ ಕಾರಂಜಿ)

ಸಂಪುಟ ೮ ಅಕ್ಟೋಬರ್ ೧೯೯೦ ಸಂಚಿಕೆ ೧


ಇವನೇ ವಾಮನೀ, ಏಕೆಂದರೆ ಇವನೇ ಎಲ್ಲಾ ವಾಮಗಳನ್ನೂ ಒಯ್ದುಕೊಡುತ್ತಾನೆ. —ಛಾಂದೋಗ್ಯ

ಅಕ್ಷಿ ಪುರುಷನು ಬ್ರಹ್ಮವೇ ಎಂಬ ಮಾತನ್ನು ಸಮರ್ಥಿಸಲು, ಈ ಶ್ರುತಿ ವಾಕ್ಯವನ್ನು ಬಳಸುತ್ತಾರೆ.

ಲೋಕದಲ್ಲೂ ಹಾಗೆಯೇ ಕಾಣುತ್ತದೆ. ರಷ್ಯದಲ್ಲಿ ಕಮ್ಯುನಿಸಮಿಗೆ ಗ್ರಹಣ ಬಡಿದ ಮೇಲೆ, ನಮ್ಮಲ್ಲಿ ಎಲ್ಲರೂ ವಾಮವಾದಿಗಳಿಗೆ ವಾಮತ್ವವನ್ನು ಒಯ್ದು ಕೊಡುತ್ತಿದ್ದಾರೆ. ಅಲ್ಲದೆ ದಕ್ಷಿಣವಾದಿಗಳೂ, ಸಂಘರ್ಷಕ್ಕೆ ಬೀದಿಗಿಳಿಯಿರಿ ಎಂದು ಕುಮ್ಮಕ್ಕು ಕೊಡುತ್ತಿದ್ದಾರೆ. ವಾಮಗಳು ಉಳಿದೆಡೆ ನಾಮಾವಶೇಷವಾಗುತ್ತಿರುವಾಗ, ಇಲ್ಲಿ ಫ್ಯಾಷನ್ ಆಗುತ್ತಿವೆ ಎಂದು ಕಾಣುತ್ತದೆ. ಬೀದಿಗಿಳಿಯಲು ಕರೆ ಕೊಡುವವರು ರಾಜೀನಾಮೆ ಕೊಟ್ಟು ತಾವು ಮೊದಲು ಬೀದಿಗಿಳಿಯಬೇಕು.

ಬರಿಯ ವಾಮವೊಂದೇ ಫ್ಯಾಷನ್ ಆಗಿಲ್ಲ. ರಾಜೀನಾಮೆಯೂ ಫ್ಯಾಷನ್ ಆಗುತ್ತಿದೆ.

ವಿರೋಧ ಪಕ್ಷದವರು ‘ಪ್ರವಾಹ ಪ್ರಕೋಪಕ್ಕೆ ನೀವೇ ಕಾರಣ. ರಾಜೀನಾಮೆ ಕೊಡಿರಿ’ ಎನ್ನುತ್ತಾರೆ. ಆಗ ಪ್ರಮುಖರು ರಾಜೀನಾಮೆ ಕೊಡುತ್ತಾರೆ. ಹಾಗಾಗಲು ಫೋರ್ಜರಿ ಪ್ರಕರಣಗಳು ವಿಜೃಂಭಿಸುತ್ತವೆ. ಕಾರಣವಾದವರು ರಾಜೀನಾಮೆ ಕೊಡುತ್ತಾರೆ. ಅಪಾದಿತರು ರಾಜೀನಾಮೆ ಕೊಡುತ್ತಾರೆ. ಪ್ರತಿನಿಧಿಗಳು, ಆಡಳಿತದಲ್ಲಿರುವವರು ಎಲ್ಲರೂ ರಾಜೀನಾಮೆ ಕೊಟ್ಟರೆಂದು ವದಂತಿ ಹಬ್ಬುತ್ತದೆ.

ಪ್ರಜಾಪ್ರಭುತ್ವ, ಕಮ್ಯುನಿಸಂ ಎರಡೂ ವಿಫಲವಾಗಿವೆ. ನಾವು ಹೊಸದೊಂದು ರಾಜಕೀಯ ಪದ್ಧತಿಯನ್ನು ರೂಪಿಸಬೇಕು ಎಂದು ನಾವು ಕರೆ ಕೊಟ್ಟು, ಕೆಲವೇ ದಿನಗಳಾದವು. ಆಹಾ ಆಶ್ಚರ್ಯವು! ಹೊಸದಾದ ರಾಜೀನಾಮೆ ಪ್ರಭುತ್ವ **(Rule by resignation)** ಆವಿರ್ಭವಿಸಿಬಿಟ್ಟಿದೆ!



-ಪ್ರಕಾಶ್

---

ವಸ್ತು ನಿಷ್ಠ ವರದಿ ಮಾಡಲು ಪತ್ರಕರ್ತರಿಗೆ ಕರೆ.

— ಸುದ್ದಿ.

ಹಾಗೆ ಮಾಡಿದರೆ ಕಮ್ಮಿಯಾಗುತ್ತಾರಲ್ಲ!

* * * *

ಸಚಿವ ಗೋಸ್ವಾಮಿ ರಾಜೀನಾಮೆ.

— ಪತ್ರಿಕೆ.

ವಿ. ಪಿ. ಸಿಂಗ್ ಅವರು ಕಂ ಅಂದರಂತೆ!

* * * *

ಲೆಕ್ಕ ಪರಿಶೋಧನಾ ಅಧಿಕಾರಿಗಳ ವರ್ಗ.

— ಪತ್ರಿಕೆ.

ವರ್ಗ ಕ್ಯಾನ್ಸಲ್ ಮಾಡೋದು ಹೇಗೆ ಅಂತ ಲೆಕ್ಕ ಮಾಡಬೇಕು ಈಗ!!

* * * *

ಗಮನ ಬೇರೆಡೆ ಸೆಳೆಯಲು ಪ್ರಧಾನಿ ಯತ್ನ : ಆರೋಪ.

— ಸುದ್ದಿ ಶೀರ್ಷಿಕೆ.

ಭ್ರಷ್ಟಾಚಾರ ತಡೆಗೆ ಲೋಕಾಯುಕ್ತಕ್ಕೆ ಮುಕ್ತ ಅವಕಾಶ.

—ಸುದ್ದಿ.

ಅಂದರೆ ಇದುವರೆಗೆ 'ಮುಕ್ತ' ಅಲ್ಲ ಅಂತಲೋ?

* * * *

ರಾಮನಗರದಲ್ಲಿ ಘರ್ಷಣೆ.

—ಪತ್ರಿಕೆ.

ರಾಮ, ರಾಮ!!

* * * *

'ಕ್ರಿಕೆಟ್ ಮ್ಯಾನೇಜರ್ ಅಗತ್ಯ ಇಲ್ಲ'.

—ಅಜರುದ್ದೀನ್.

'ಮ್ಯಾನೇಜರ್ ಬೇಡಿ' ಅಂದರೆ ಸಾಕು!

* * * *

ನಿಮಗೊಂದು ಮನಸ್ಸಿದ್ದರೆ, ಒಂಟಿತನ ನಿಮ್ಮನ್ನು ಕಾಡುವುದೇ ಇಲ್ಲ.

—ಉರ್ದು ನಾಷಿಕಿ.

ನಮ್ಮ ಸಮಸ್ಯೆ, ನಮ್ಮ ಮನಸ್ಸೇ ನಮ್ಮನ್ನ ಕಾಡುವುದು!

* * * *

ಹತ್ತು ಸಾವಿರ ರೂ.ಗಳ ರೈತರ ಸಾಲ ಮನ್ನಾ.

—ಸುದ್ದಿ.

ಸಾಲ ತೆಗೆದುಕೊಳ್ಳದಿದ್ದವರು ಖಿನ್ನರಾದರಂತೆ!

* * * *

ಮಂಡಲ್ ವರದಿ ಬೆಂಬಲಿಸಿ ಅರೆ ಬೆತ್ತಲೆ ಮೆರವಣಿಗೆ.

—ಸುದ್ದಿ.

ಸಧ್ಯ, ಇನ್ನೂ ಜೋರಾಗಿ ಬೆಂಬಲಿಸಲಿಲ್ಲವಲ್ಲ!

# ಸೊಸೆ ತಲೆ ಸವರಿದಾಗ

—ಜಿ. ಎನ್. ಜಿ

---

“Old order changeth” ಎನ್ನುತ್ತಾರೆ. ಆದರೆ ನಮ್ಮ ದಿನಕರನ ವಿಷಯದಲ್ಲಿ “Old order persists” ಎನ್ನುವ ಹಾಗೆ ಆಗಿತ್ತು ಕೆಲವು ದಿನ.

ಅವನ ಮದುವೆ ಆದದ್ದು ಹಳ್ಳೀಲಿ—ದೊಡ್ಡ ಮನೆಯಲ್ಲಿ. ನಮಗೂ ಖುಷಿ ಹಳ್ಳಿ ಮದುವೆ ನೋಡಲು. ದಿನಕರನ ತಂದೆ ಹಳ್ಳಿಯಲ್ಲಿ ಶ್ಯಾನುಭೋಗರಾಗಿದ್ದವರು. ದೊಡ್ಡ ಕುಳ. ಜಮೀನು-ದನ-ಕರು-ತೋಟ-ಛತ್ರದಂಥಾ ಮನೆ.

ದಿನಕರನ ತಂದೆ ತಮ್ಮ ಮನೆ ಬಾಗಿಲಲ್ಲೇ ಮದುವೆ ಆಗಬೇಕೆಂದು ಹಟ ಹಿಡಿದಿದ್ದರಿಂದ ಗಂಡಿನ ಮನೆ ಬಾಗಿಲಲ್ಲೇ ನಡೆಯಿತು ಮದುವೆ.

ದೊಡ್ಡ ಹಸಿರುವಾಣಿ ಚಪ್ಪರ. ಅದಕ್ಕೆ ದೀಪಾಲಂಕಾರ. Uniformನಲ್ಲಿ ಬಂದ ಬ್ಯಾಂಡ್‌ನವರು. ಆ ಹಳ್ಳಿಗೆ ಅದೇ ಮೊದಲಂತೆ. ಹಳ್ಳಿಗೆ ಹಳ್ಳಿಯೇ ಅಲಂಕೃತವಾಗಿತ್ತು. ಎಲ್ಲರಿಗೂ ಎಲ್ಲೂ ಇಲ್ಲದ ಸಂಭ್ರಮ. ಅದೇನು ಓಡಾಟ, ಶ್ಯಾನುಭೋಗರ ಮಾತು ಎಂದರೆ ಸುಗ್ರೀವಾಜ್ಞೆ. ಸುತ್ತ ಮುತ್ತ ಹಳ್ಳಿಗಳ ಜನರೇ ಸೇರಿದ್ದರು.

ನಮಗೆಲ್ಲಾ ಇಳಿದುಕೊಳ್ಳಲು ಮನೆಗಳನ್ನು ಬಿಡಿಸಿಕೊಟ್ಟಿದ್ದರು. ಪ್ರತಿಯೊಬ್ಬರಿಗೂ ಮೆತ್ತನೆಯ ಹಾಸಿಗೆ-ಕಂಬಳಿ, ಇಸ್ಪೀಟ್ ಪ್ಯಾಕ್‌ಗಳು-ಬೀಡಿ-ಸಿಗರೇಟು-ಕಾಫಿ-ಟೀ-24 ಗಂಟೆ ಸರಬರಾಜು.

ಜೋಡು ಎತ್ತಿನ ಗಾಡಿಯನ್ನು ಹೂನಿಂದ ಅಲಂಕರಿಸಿ, ಅದರ ಮೇಲೆ ವಧೂ ವರರ ಮೆರವಣಿಗೆ ಹಳ್ಳಿ ತುಂಬ.

ಹಾಲಿನ ಹೊಳೆಯನ್ನೇ ಹರಿಸಿದ್ದರು ಶ್ಯಾನುಭೋಗರು. ಬಸ್ಸಿಗೆ ಹೊತ್ತಾಗುತ್ತೆ ಅಂತ ಕ್ಯೂನಲ್ಲಿ ನಿಂತು—ಸಿಕ್ಕಲ್ಲಿ ಜಾಗ ಹಿಡಿದು—ರೆಸೆಪ್ಷನ್ ಊಟ ಮುಗಿಸಿ

ಓಡು ಬರುತ್ತಿದ್ದ ಬೆಂಗಳೂರು ಜನಕ್ಕೆ ಈ ಐದು ದಿನದ ಮದುವೆ_ಒಂದು ಹೊಸ ಲೋಕವನ್ನೇ ಸೃಷ್ಟಿಸಿತ್ತು. ಎಲ್ಲವೂ ನಿಧಾನ–ಅಚ್ಚುಕಟ್ಟು. ಎಲ್ಲೆಲ್ಲೂ ಆನಂದ.

ಈ ಅದ್ದೂರಿ ಮದುವೆ ಮುಗಿಸಿಕೊಂಡು ದಿನಕರನನ್ನು ಹಳ್ಳೀಲಿ ಬಿಟ್ಟು, ಪುನಃ ಯಾಂತ್ರಿಕ ಜೀವನದ, ಡಬ್ಬಿ ಊಟದ, ಬಸ್‌ಗೆ ಕಾಯುವ ಬೆಂಗಳೂರನ್ನು ಬೇಸರದಿಂದಲೇ ಸೇರಿದೆವು. ದಿನಕರನೇ ಪುಣ್ಯವಂತ ಎಂದುಕೊಂಡೆವು.

*　　　*　　　*

ಹನಿಮೂನ್‌ಗೆಂದು 15 ದಿನ ರಜ ಹಾಕಿದ್ದ ದಿನಕರ ಮಾರನೇ ದಿನವೇ ಕಛೇರಿಗೆ ಕೆಲಸಕ್ಕೆ ಬಂದಾಗ ನಮಗಿಂತ ನಮ್ಮ ಸಾಹೇಬರಿಗೇ ಆಶ್ಚರ್ಯ.

"How is it, Dinkar? You have reported so early" ಎಂದು ಸಾಹೇಬರು ಕೇಳಿದಾಗ,

"Duty, Sir" ಎಂದು ಜಾರಿಕೊಂಡಿದ್ದ.

ಇದರಲ್ಲಿ ಏನೋ ಅನುಮಾನ ಇದೆ ನಮಗೆ.

"ಏನಯ್ಯಾ ದಿನಕರ, 15 ದಿನ ಊಟೀಲಿ ಮಜವಾಗಿ ಕಾಲ ಕಳೆಯೋದು. ಬಿಟ್ಟು ಪುನಃ ಕ್ಯಾಂಟೀನು ಊಟಕ್ಕೇ ಜೋತು ಬಿದ್ದೆಯಲ್ಲಾ?" ಎಂದು ಕೇಳಿದೆ, ಕ್ಲಬ್‌ನಲ್ಲಿ ಸೇರಿದಾಗ.

ದಿನಕರ ತ್ರೇತಾಯುಗದಲ್ಲಿರಬೇಕಾಗಿತ್ತು. ಪಿತೃ ವಾಕ್ಯ ಪರಿಪಾಲಕ ಶ್ರೀ ರಾಮಚಂದ್ರನ ಅಪರಾವತಾರ.

"ಹನಿಮೂನೂ ಬ್ಯಾಡಾ....ಯಾವ ಮೂನೂ ಬ್ಯಾಡಾ....ಊಟಿಯಂತೆ ಊಟಿ....ಅಲ್ಲಿ ಮಾಡೋದು ಅಷ್ಟೆ....ಇಲ್ಲಿ ಮಾಡೋದು ಅಷ್ಟೆ....ಮೊದಲು ಸೊಸೆ ಮನೆ ವಾರ್ತೆ ಕಲೀಲಿ....ಎರಡು ತಿಂಗಳು ಇಲ್ಲೇ ಬಿಟ್ಟು ಹೋಗು....ಅನಂತರ ಇದ್ದೇ

"ಇನ್ನು ನಿಮ್ಮ ಪಾಡು" ಎಂದರಂತೆ ಶ್ಯಾನುಭೋಗರು.

ಪ್ಯಾಪು ಮೋರೆ ಹಾಕಿಕೊಂಡು ವಾಪಸ್ಸು ಬಂದಿದ್ದ ದಿನಕರ.

ಇದಾಗಿ ಮೂರು ನಾಲ್ಕು ದಿನ ಆಗಿತ್ತು. ದಿನಕರ ಕೆಲಸಕ್ಕೇ ಬಂದಿರಲಿಲ್ಲ. ಹಳ್ಳಿಗೆ ಹೋಗಿರಬೇಕು. ಹೊಸ ಹೆಂಡತಿ....ಹೊಸ ಬಿಸಿ ಎಂದುಕೊಂಡಿದ್ದೆವು. ಒಂದು ವಾರವಾಯಿತು...ಆಸಾಮಿ ಪತ್ತೇನೇ ಇಲ್ಲ. ಅವನ ಸೆಕ್ಷನ್‌ಗೆ ಹೋಗಿ ವಿಚಾರಿಸಿದಾಗ ಹದಿನೈದು ದಿನ ಮೆಡಿಕಲ್ ಲೀವ್ ಹಾಕಿದಾನೆ ಎಂದು ತಿಳಿಯಿತು.

ಖದೀಮ. ಏನೋ plan ಮಾಡಿ ಹೆಂಡತೀನ ಹ್ಯಾಗೋ ಹಾರಿಸಿಕೊಂಡು ಹೋಗಿದಾನೆ ಹನಿಮೂನ್‌ಗೆ ಎಂದು ತರ್ಕ ಮಾಡಿದೆವು. ಹ್ಯಾಗಿದ್ದರೂ ಬಂದೇ ಬರುತ್ತಾನಲ್ಲ. ಕೇಳಿದರಾಯಿತು ಎಂದುಕೊಂಡೆವು.

* * *

ಒಂದು ದಿನ ಸಂಜೆ ಕ್ಲಬ್‌ನಲ್ಲಿ ಯಥಾ ಪ್ರಕಾರ ದಿನಕರ ಹಾಜರ್ರು.
"Think of the devil....here is Dinkar" ಎಂದೆವು.

"ಏನ್ರಯ್ಯ! ನಾಳೆ ಸಂಜೆ ನಮ್ಮ ಮನೇಲಿ ಎಲ್ಲರಿಗೂ ಪಾರ್ಟಿ. Let us celebrate. ಕರೆದುಕೊಂಡು ಬಂದಿದೀನಿ ಕಮಲಾನ್ನ" ಎಂದ.

"ಏನಯ್ಯಾ, ಶ್ರೀ ರಾಮಚಂದ್ರನ ಅಪರಾವತಾರ. ನಿಮ್ಮಪ್ಪ ಹಾಕಿದ್ದ ಗೆರೇನ ದಾಟೋನಲ್ಲ ನೀನು. How come?" ಎಂದೆ.

"ಇದರ ಕ್ರೆಡಿಟ್ ಕಮಲಾಗೆ ಸೇರಬೇಕಾದ್ದು" ಎಂದ ಮುಗಮ್ಮಾಗಿ.

ನಾವು ಓಹೋ ಅತ್ತೆ-ಸೊಸೆ ಜಗಳ. Again a bride burning case. ಶ್ಯಾನುಭೋಗರು ಜಾಣತನದಿಂದ ಸೊಸೇನ ಸಾಗ ಹಾಕಿದ್ದಾರೆ ಎಂದುಕೊಂಡೆವು.

* * *

ದಿನಕರನ ಮನೇಲಿ ನಾವೆಲ್ಲಾ ಪಾರ್ಟಿಗೆ ಸೇರಿದ್ದಾಗ ವಿಷಯ ತಿಳಿಯಿತು.

ಕಮಲ ಮಳ್ಳಿಯಂತೆ ಅದೂ ಇದೂ ಹೊರಗಿನ ಕೆಲಸಗಳನ್ನು ಮಾಡಿಕೊಂಡೇ ಇದ್ದಳಂತೆ. ಇನ್ನೂ ಅಡುಗೆ ಮಾಡಲು ಬಿಟ್ಟಿರಲಿಲ್ಲವಂತೆ. ಇವಳೂ ಒಳಗೊಳಗೇ plan ಹಾಕುತ್ತಿದ್ದಳಂತೆ. ಸಮಯ ಕಾಯುತ್ತಿದ್ದಳಂತೆ.

ಒಂದು ದಿನ ಅತ್ತೆಮ್ಮ

“ಕಮಲಾ, ಸಂಜ ಅನ್ನ ನೀನೇ ಮಾಡು. ಪಾಟಿ ತಲೆ ಸವರಿ ಎರಡು ಪಾವು ಹಾಕು. ನಾಕು” ಎಂದರಂತೆ.

ಕಮಲಾ ಸಮಯಕ್ಕೆ ಕಾಯುತ್ತಿದ್ದಳು. ಕೋಲಾರದ ಕಡೆಯವಳು ಕಮಲಾ. ತಮಿಳೂ ಗೊತ್ತಿತ್ತು.

ಅಜ್ಜಿ ಎಂದರೆ ‘ಪಾಟಿ’ ಶ್ಯಾನುಭೋಗರ ತಾಯಿ ಮುದುಕಿ ವಿತಂತು. ಮೂಲೇಲಿ ಹೂ ಬತ್ತಿ ಹೊಸೆಯುತ್ತಾ ಮಡಿಯಲ್ಲಿ ಮುಣಾ-ಮುಣಾ ಎನ್ನುತ್ತಾ ಕೂತಿತ್ತು.

ಕಮಲಾ ಸೀದಾ ಹೋದವಳೆ ಅಜ್ಜಿ ತಲೆ ಮುಸುಕು ತೆಗೆದು, ಅವರ ಬೋಳು ತಲೆ ಸವರಿ, ಅನಂತರ ಅನ್ನಕ್ಕಿಡಲು ಹೊರಟಳಂತೆ.

“ಇದೇನೇ ಇದು ಚಂಡಾಲಿ” ಎಂದಿತಂತೆ ಮುದುಕಿ.

“ನಿಮ್ಮ ಸೊಸೇನ ಕೇಳಿ” ಎಂದಳಂತೆ ಕಮಲಾ.

ಮುದುಕಿಗೆ ಬ್ರಹ್ಮಾಂಡ ಕೋಪ ಬಂದಿತಂತೆ. ಮಗ ಶ್ಯಾನುಭೋಗರು ಬಂದ ಕೂಡಲೇ

‘‘ಹಾಳು ಪಟ್ಟಣದ ಹುಡುಗೀರು ಬ್ಯಾಡಾ ಅಂತ ಬಡಕೊಂಡೆ. ಕೇಳ್ತೀಯಾ? ನೋಡು. ಇವತ್ತು ಏನು ಮಾಡಿದಳು ಗೊತ್ತಾ? ನನ್ನ ಪಾಡಿಗೆ ನಾನು ಮೂಲೇಲಿ ಕೂತಿದ್ದರೆ ಮಳ್ಳೀ ಹಾಗೆ ಬಂದು ಮುಸುಕು ತೆಗೆದು, ಬೋಳು ತಲೆ ಸವರಿದ್ಲೂ ಅಲ್ಲದೇ ಅದ್ಯಾಕೆ ಹೀಗೆ? ಎಂದರೆ ನಿಮ್ಮ ಸೊಸೇನ ಕೇಳಿ ಅಂತಾಳಲ್ಲ. ಸೀತಮ್ಮ ನಂಥ ಸೊಸೆಗೂ ನನಗೂ ಮಧ್ಯ ತಂದು ಇಡ್ತಾಳಲ್ಲಾ ಇವಳು. ಹೀಗೇ ಇರ್ತಾಳಾ? ನಾನು ಬದುಕಿದ್ದರೆ ನೋಡ್ತೀನಿ. ಮೊದ್ಲು ಓಡಿಸು ಇವಳನ್ನ. ಇಲ್ಲದಿದ್ದರೆ ನಾಳೆ

ಬೀಗ್ಗ ನದೀಲಿ ನನ್ನ ಹೆಣ ನೋಡ್ತೀಯ" ಎಂದು ಕೂಗಾಡಿತಂತೆ ಮುದುಕಿ.

ಶ್ಯಾನುಭೋಗರೂ ಮಾತ್ರ ವಾಕ್ಯ ಪರಿಪಾಲಕರು. ತಾಯಿ ಹಾಕಿದ ಗೆರೆ ದಾಟಿದವರಲ್ಲ. ಆದರೆ ಸೊಸೆನ ಓಡಿಸಬೇಕು ಎಂದರೆ ಎಲ್ಲಿಗೆ? ಪಾಪ! ಹೆಣ್ಣು ಮಗಳು! ತಮ್ಮ ಮಗಳಿಗೇ ಹೀಗೆ ಆಗಿದ್ದರೆ? ಅದಕ್ಕೆ ಒಂದು ಬುದ್ಧಿವಂತಿಕೆ ಮಾಡಿದರು. ಸೊಸೇನ ಕರೆದು

"ಅಮ್ಮಾ, ಆಗಿದ್ದು ಆಗಿ ಹೋಯಿತು. ವಿಷಯ ನನಗೆ ಗೊತ್ತು. ನೀನು ತಿಳಿದೋ, ತಿಳಿಯಂದೆಯೋ ಇವಳು ಹೇಳಿದ್ದನ್ನ. ಅಪಾರ್ಥ ಮಾಡಿಕೋಂಡು ಮಾಡಿದೆ. ಈಗ ಕೂಡಲೇ ಗಂಟು ಕಟ್ಟು. ಹೋಗೋಣ ಕೊನೆಯ ಬಸ್ಸು ಬರೋ ಹೊತ್ತು" ಎಂದರಂತೆ.

"ಎಲ್ಲಿಗೆ ಮಾವಯ್ಯಾ?" ಎಂದು ಗಾಬರಿಯಿಂದ ಕೇಳಿದಳಂತೆ.

"ಹೇಳಿದಷ್ಟು ಮಾಡು. ನಿನಗೆ ಒಳ್ಳೆಯದಾಗುತ್ತೆ" ಎಂದು ಹೋದರಂತೆ ಶ್ಯಾನಭೋಗರು.

ಕಮಲಳನ್ನು ರಾತ್ರಿ ಬೆಂಗಳೂರಿಗೆ ಬಸ್ಸಿನಲ್ಲಿ ಕರೆದುಕೊಂಡು ಬಂದು.... ಮಗನ ಮನೆ ಬಾಗಿಲಿಗೆ ಬಿಟ್ಟು,

"ಅಯ್ಯಾ! ಇದು ನಿನ್ನ ವಸ್ತು ಕಾಪಾಡಿಕೋ"

ಎಂದವರೇ ನಿಲ್ಲದೇ ಹೊರಟೇಬಿಟ್ಟರಂತೆ.



ರಾಮು ಇವತ್ತು ಹಿಸ್ಟರಿ ಕ್ಲಾಸಿಗೆ ಚಕ್ಕರ್ ಹಾಕೋಣ, ಏನಂತಿ?

ಶಾಮು ಇಲ್ಲಪ್ಪ. ನನಗೆ ನಿನ್ನೆ ರಾತ್ರಿಯೆಲ್ಲಾ ನಿದ್ದೆಯಿಲ್ಲ. ನಿದ್ದೆ ಅಗತ್ಯವಾಗಿ ಬೇಕಾಗಿದೆ.



"ಕಂಪ್ಯಾತ್, ಇರಾಕ್ ನಲ್ಲಿರೋ ಭಾರತೀಯರೆಲ್ಲಾ ಹಿಂತಿರುಗಿದರೆ, ನಮ್ಮ ದೇಶದ ಜನ ಸಂಖ್ಯೆ ಇನ್ನೂ ಜಾಸ್ತಿ ಆಗುಲ್ವೇನ್ರಿ?"

# ಸಮಸ್ಯೆ-ಪರಿಹಾರ

— ದುರ್ವಿನೀತ

---

ವಿದ್ವದ್ವಿನೋದದಲ್ಲಿ, ಸಮಸ್ಯಾಪೂರ್ತಿಯೂ ಒಂದು. ಅಷ್ಟಾವಧಾನದಲ್ಲಿ ಇದಕ್ಕೂ ಒಂದು ಮುಖ್ಯ ಸ್ಥಾನವಿದೆ. ಭೋಜ—ಕಾಳಿದಾಸರ ಪ್ರಸಂಗಗಳಲ್ಲಿ ಸಮಸ್ಯೆಗಳೂ ಇವೆ. ಪ್ರಕೃತ, ವಾಸಿಷ್ಠ ಗಣಪತಿ ಮುನಿಗಳು ಬಿಡಿಸಿದ ಮೂರು ಸಮಸ್ಯೆಗಳನ್ನು ಇಲ್ಲಿ ಕೊಟ್ಟಿದೆ. ಇವನ್ನು ನನ್ನ ಗಮನಕ್ಕೆ ತಂದವರು ಆದವಾನಿಯ ಎ. ಬಿ. ಎಸ್. ಕಾಲೇಜಿನ ಕನ್ನಡ ಉಪನ್ಯಾಸಕರಾದ ಶ್ರೀ ಜಿ. ಎನ್. ಭಟ್. ಮಂತ್ರಾಲಯದ ನ್ಯಾಯ ಶಿರೋಮಣಿ ಶ್ರೀ ಕೆ. ಗಣಪತಿ ಭಟ್ಟ ಅವರು ಕೊಟ್ಟ ಶ್ರೀ "ಶಂಕರ ಕೃಪಾ" ಪತ್ರಿಕೆಯ ಒಂದು ಸಂಚಿಕೆಯಲ್ಲಿ ಈ ವಿಷಯದಲ್ಲಿ ಅನೇಕ ವಿವರಗಳಿವೆ.

೧. ಸಮಸ್ಯೆ ವತ್ಸರಸ್ಯೈಕದಾ ಗೌರೀ ಪತಿವಕ್ತ್ರಂ ನ ಪಶ್ಯತಿ

(ವರ್ಷದಲ್ಲಿ ಒಂದು ದಿನ ಲೋಕಮಾತೆ ಗೌರಿಯು ತನ್ನ ಪತಿಯಾದ ಶಿವನ ಮುಖವನ್ನು ನೋಡುವುದಿಲ್ಲ.)

ಸಮಸ್ಯಾ ಪೂರ್ತಿ

ಚತುರ್ಥ್ಯಾಂ ಭಾದ್ರ ಶುಕ್ಲಸ್ಯ ಚಂದ್ರದರ್ಶನ ಶಂಕಯಾ.

(ಭಾದ್ರಪದ ಶುಕ್ಲ ಚತುರ್ಥಿಯಂದು ಶಿವನ ಮುಖವನ್ನು ನೋಡಿದರೆ, ಜಟೆಯಲ್ಲಿರುವ ಚಂದ್ರನ ದರ್ಶನವಾಗುವುದೆಂಬ ಶಂಕೆಯಿಂದ.)

೨. ಪಿಪೀಲಿಕಾ ಚುಂಬತಿ ಚಂದ್ರಮಂಡಲಂ.

(ಇರುವೆಗಳು ಚಂದ್ರಮಂಡಲವನ್ನು ಚುಂಬಿಸುತ್ತವೆ.)

ಸಮಸ್ಯಾ ಪೂರ್ತಿ

ಸತೀ ವಿಯೋಗೇನ ವಿಷಣ್ಣ ಚೇತಸಃ
ಪ್ರಭೋಃ ಶಯಾನಸ್ಯ ಹಿಮಾಲಯೇ ಗಿರೌ
ಶಿವಸ್ಯ ಚೂಡಾಕಲಿತಂ ಸುಧಾಶಯಾ.
(ಪಿಪೀಲಿಕಾ ಚುಂಬತಿ ಚಂದ್ರಮಂಡಲಂ )

(ತನ್ನ ಪತಿ ಸತೀದೇವಿಯ ಮರಣದಿಂದ ಶಿವನು ದುಃಖಿತನಾಗಿ ಹಿಮಾಲಯ ಪರ್ವತದ ಬಂಡೆಯ ಮೇಲೆ ಮಲಗಿರಲು, ಶಿವನ ಜಟೆಯಲ್ಲಿದ್ದ ಚಂದ್ರಮಂಡಲವನ್ನು ಅಮೃತವೆಂದು ಭ್ರಮಿಸಿದ. (ಇರುವೆಗಳು ಚಂದ್ರಮಂಡಲವನ್ನು ಚುಂಬಿಸಿದವು.)

೩. ಸ್ತನ ವಸ್ತ್ರಂ ಪರಿತಜ್ಯ ವಧೂಃ ಶ್ವಶುರಮಿಚ್ಛತಿ

(ಎದೆಯ ಮೇಲಿನ ಬಟ್ಟೆಯನ್ನು ತೆಗೆದು ಹಾಕಿದ ಸೊಸೆಯು ಮಾವನನ್ನು ಬಯಸಿದಳು....ಆದರವಳು ಸುಚರಿತ್ರೆ )

ಸಮಸ್ಯಾ ಪೂರ್ತಿ :

ಹಿಡಿಂಬಾ ಭೀಮದಯಿತಾ ನಿದಾಘೇಘರ್ಮ ಪೀಡಿತಾ

(ಭೀಮ ಪತ್ನಿಯಾದ ಹಿಡಿಂಬೆಯು ಸೆರೆಯಿಂದ ಪೀಡಿತಳಾಗಿ ಕಂಚುಕವನು ತೊರೆದು (ಮಾವನಾದ) ವಾಯುವನ್ನು ಎಂದರೆ ಗಾಳಿಯನ್ನು ಬಯಸಿದಳು.)

ಆಕ್ಷೇಪ....ದ್ರೌಪದೀ ಭೀಮದಯಿತಾ ಎಂದು ಸಮಸ್ಯೆ ಪೂರ್ತಿ ಮಾಡಬೇಕಿತ್ತು.

ಸಮಾಧಾನ....ಸ್ತನ ವಸ್ತ್ರಂ ಎಂಬುದರ ಬದಲು ಉತ್ತರೀಯಂ ಎಂದೇಕೆ ಕೇಳಬಾರದಿತ್ತು ?

* * * *

ಡಾ|| ಆರ್. ಶೇಷಶಾಸ್ತ್ರಿ ಅವರು ಇಂತಹದೊಂದು ಸಮಸ್ಯೆಯನ್ನು ಕೇಳಿದರಂತೆ.

(ವಾಮನನು ತನ್ನ ಮೊದಲನೆಯ ಹೆಜ್ಜೆಯಿಂದ ಭೂಮಿಯನ್ನೂ, ಎರಡನೆಯ ಹೆಜ್ಜೆಯಿಂದ ಆಕಾಶವನ್ನೂ ಅಳೆದನಷ್ಟೆ ? ಮೂರನೆಯ ಹೆಜ್ಜೆಯಿಂದ ಬಲಿಯನ್ನು ಮೆಟ್ಟಿದನಲ್ಲವೆ? ಭೂಮಿಯನ್ನು ಅಳೆಯುವಾಗ ಬಲಿಯ ತಲೆಯೂ ಸೇರಿರಬೇಕು. (ಆದರೆ ಬಲಿ ತಲೆಯನ್ನು ತೋರಿಸಿದ.) ಹಾಗಾದರೆ ಬಲಿ ಚಕ್ರವರ್ತಿ ಎಲ್ಲಿದ್ದ ?

ಸಮಾಧಾನ ಭೂಮಿಯನ್ನಳೆಯುವಾಗ, ಬಲಿಯು ಬೆರಳುಗಳ ನಡುವೆ ಇದ್ದ. (ಆದ್ದರಿಂದ ತಲೆಯನ್ನು ತೋರಿಸಿದಾಗ ತ್ರಿವಿಕ್ರಮನು ಆಕ್ಷೇಪಿಸಲಿಲ್ಲ.) ಸಮಸ್ಯೆಯನ್ನು ಪರಿಹರಿಸಿದವರು ಅನಂತಪುರಂ ಅಷ್ಟಾವಧಾನಿ ಶ್ರೀ ಜೆ. ಸದಾನಂದ ಶಾಸ್ತ್ರಿ. ಈ ಸಂಬಂಧದ ಕವನ ಲಭ್ಯವಿಲ್ಲ.

ಸಮಸ್ಯೆಯನ್ನು ಪೂರ್ತಿಗೊಳಿಸುವಲ್ಲಿ ಎದುರಾಗುವ ಕಷ್ಟಗಳು

೧. ಸಮಸ್ಯೆಯು ಒಂದು ಪದ್ಯದ ಕೊನೆಯ ಸಾಲಿನಲ್ಲಿರುತ್ತದೆ. ಆ ಪದ್ಯದ ಛಂದಸ್ಸಿನಲ್ಲೇ ಅದನ್ನು ಪೂರ್ಣಗೊಳಿಸಬೇಕು. ಸಾಮಾನ್ಯವಾಗಿ ಕನ್ನಡದಲ್ಲಿ ಸಮಸ್ಯೆಗಳು ಕಂದ ಪದ್ಯದ ಕೊನೆಯ ಸಾಲುಗಳು. ಮತ್ತೇಭವಿಕ್ರೀಡಿತ ಮೊದಲಾದ ಆರು ವೃತ್ತಗಳ ಕೊನೆಯ ಸಾಲೂ ಆಗಿರಬಹುದು.

ಉದಾ ಪಾಳ್ತಿಪ್ಪಣನೆತ್ತಪೋಗಿರ್ದಪನೆಂದರಿಯೆಂ.

(ಈ ಹಾಳು ತಿಪ್ಪಣ್ಣ ಎಲ್ಲಿಗೆ ಹೋದನೋ ಗೊತ್ತಿಲ್ಲ )

೨. ಸಮಸ್ಯೆಗೆ ಉತ್ತರವನ್ನು ಕೂಡಲೇ ಕೊಡಬೇಕು. ಇಲ್ಲದಿದ್ದರೆ ಸೋತ ಹಾಗೆ. ಸಂಸ್ಕೃತದಲ್ಲಿ ಪ್ರಾಸ ನಿಯಮವಿಲ್ಲ. ಮೂರು ದಿನ ಟೈಂ ಕೊಡಿ ಎಂದು ಕೇಳುವ ಹಾಗಿಲ್ಲ.

ಮೇಲೆ ಕೊಟ್ಟ ಸಮಸ್ಯೆಗೆ ಪರಿಹಾರ

ಅಳ್ಕಿದನೊ ಕರಂ ಮುಂಗುಪೆಗೆ
ತಳ್ಕಳಗಾಗಿ ಚಪಲೆಯುಂಬೆಂಬತ್ತಿದನೋ
ಕೋಳ್ಕುದಿಗೊಂಡನೊ ಪ್ರಮದೆಗೆ
(ಪಾಳ್ತಿಪ್ಪಣನೆತ್ತಪೋಗಿರ್ದಪನೆಂದರಿಯೆಂ).

[ಟಿಪ್ಪಣಿ : ಸಮಸ್ಯೆಯನ್ನು ಕೊಟ್ಟವರು ಶ್ರೀ ಬೆಳಗೆರೆ ಕೃಷ್ಣಶಾಸ್ತ್ರಿ. ಪರಿಹರಿಸಿದವರು ದುರ್ವಿನೀತ. ಕೊನೆಯ ಸಾಲಿನಲ್ಲಿ ಪ್ರಾಸ ಲೋಪವಾಗಿದೆ ಕಂದ. ಪದ್ಯದ ಛಂದಸ್ಸನ್ನು ಲೆಕ್ಕ ಹಾಕಿಲ್ಲ.]



ಮಿನಿ ಕತೆ

# ಪ್ರಜಾಪ್ರಭುತ್ವ

—ನಾ. ಡಿಸೋಜ

---

ಪರಕು ಗಡ್ಡದ, ಹೆಗಲು ಜೋಳಿಗೆಯ ಈರ್ವರು ಒಂದು ವಿಚಾರ ಸಂಕಿರಣ ಮುಗಿಸಿಕೊಂಡು ಹೊರಟಿದ್ದರು. ಊರಿಗೆ ಹೋಗಲೆಂದು ಬಸ್ ನಿಲ್ದಾಣಕ್ಕೆ ಬಂದು ಬಸ್ಸಿನ ಬಗ್ಗೆ ಕೇಳಿದಾಗ

“ಎಪ್ರೆಸ್ ಬಸ್ ಇಲ್ರಿ....ಅಡನಾಡಿ ಬಸ್ಸದೆ” ಎಂಬ ಉತ್ತರ ಸಿಕ್ಕಿತು.

ಯಾವುದೋ ಒಂದು. ಒಂದು ಗಂಟೆ ಮೊದಲು ಅನಂತರ ಊರು ಸೇರಿದರಾಯ್ತು ಎಂದು ಉತ್ತಮಾರಮ್ಮ ರೋಡ್‌ವೇಸ್ ಎಂದು ಬೋರ್ಡು ಬರೆಸಿಕೊಂಡ ಬಸ್ಸನ್ನೇ ಈರ್ವರೂ ಹತ್ತಿ, ಡ್ರೈವರ್ ಹಿಂದಿನ ಸೀಟಿನಲ್ಲಿ ಮಂಡಿಸಿದರು.

ಅಡನಾಡಿ ಬಸ್ಸು. ಎರಡು ಕಿ.ಮೀ.ಗೆ ಮೂರು ಸಾರಿ ನಿಲ್ಲುತ್ತದೆ. ಒಂದು ಸಾರಿ ಇಳಿಯುವವರಿಗಾಗಿ. ಎರಡು ಸಾರಿ ಹತ್ತುವವರಿಗಾಗಿ. ಬಸ್ಸಿನ ಒಳಗೆ ಬೀಡಿ, ಸಿಗರೇಟಿನ ಹೊಗೆಯ ಜೊತೆಗೆ ಎಲೆ ಅಡಿಕೆ, ತಂಬಾಕು, ಕಡ್ಲೆಕಾಯಿ ಪಕೋಡ ಇತ್ಯಾದಿಗಳ ಸೇವನೆ, ವಾಸನೆ. ಜೊತೆಗೆ ಗಂಡಸರ, ಹೆಂಗಸರ ಕೂಗು. ಮಕ್ಕಳ ಅಳು. ಹಿಂಬದಿಯಲ್ಲಿ ಒಂದು ಕುರಿ. ಸೀಟಿನಡಿಯಲ್ಲಿ ಐದಾರು ಕೋಳಿಗಳು.

ಹಗ ಮತ್ತು ಹಜೋ. ಇಬ್ಬರೂ ತಮ್ಮದೇ ಪ್ರಪಂಚದಲ್ಲಿದ್ದರು.

ವೈಚಾರಿಕತೆ. ವೈಜ್ಞಾನಿಕ ಮನೋಭಾವ. ಸಾಕ್ಷರತೆ. ಮೂಢ ನಂಬಿಕೆಯ ನಿರ್ಮೂಲನ. ಸಮಾಜವಾದ. ಪರೆಸ್ಟ್ರೋಯಿಕ. ಗ್ಲಾಸ್‌ನಾಸ್ತ್. ಈಲಿಯಟ್. ಕಾಮೂಬಂಡಾಯ. ಸೃಜನಶೀಲತೆ. ಕಮಿಟ್‌ಮೆಂಟ್. ಮಣ್ಣಿನ ವಾಸನೆ, ಪೀಟರ್‌ಬ್ರೂಕ್‌ನ ಮಹಾಭಾರತ. ಸಾಲ್ವಡೋರ್ ಡಾಲಿಯ ಕಲೆ.. ಇತ್ಯಾದಿ, ಇತ್ಯಾದಿ ಅವರ ಮಾತು ಸಾಗಿತ್ತು.

ಡ್ರೈವರ್ ಬಸ್ಸು ನಿಂತಾಗೆಲ್ಲ ಬೀಡಿ ಹಚ್ಚುತ್ತಿದ್ದ. ಹಾಗೇ ಬಗ್ಗಿ, ರಸ್ತೆ ಪಕ್ಕದ ಯಾರನ್ನೋ ಮಾತನಾಡಿಸುತ್ತಿದ್ದ. ಕಂಡಕ್ಟರ್ ರೈಟ್ ಹೇಳಿದ ಎಷ್ಟೋ

ಹೊತ್ತಿನ ಬಳಿಕ ಮಾತು ನಿಲ್ಲಿಸಿ ಮೆರೆಯುತ್ತಿದ್ದ. ಅಷ್ಟು ದೂರ ಹೋಗಲಿಕ್ಕಿಲ್ಲ.... ಬ್ರೇಕ್

ಬಸ್ಸು ಕೊಂಚ ದೂರ ಬಂದಿತ್ತು.

ಮುಂದೆ ರಸ್ತೆಯಲ್ಲಿ ಭಾರೀ ಜನ ಹೊರಟಿದ್ದರು. ಉದ್ದೋ ಉದ್ದವಾದ ಮೆರವಣಿಗೆ. ನಡುವೆ ಒಂದು ಪಲ್ಲಕ್ಕಿ. ಡೊಳ್ಳು, ನಗಾರಿ, ಕಹಳೆ, ಕೊಂಬು, ಎಲ್ಲ ಇತ್ತು.

ಡ್ರೈವರ್ ವೇಗ ತಗ್ಗಿಸಿ, ಹಿಂತಿರುಗಿ ಕೂಗಿದ.

"ಸಣ್‌ವೀರು...."

"ಬಂದೆ ಕಣಣ್ಣ."

ಕಂಡಕ್ಟರ್ ಜನರ ನಡುವೆ ದಾರಿ ಮಾಡಿಕೊಂಡು ಬಂದ.

"ಏನಣ್ಣ?"

"ಯಾವ್ದು ಉತ್ಸವ?"

"ಉತ್ತೂರಮ್ಮನ ಉತ್ಸವ ಅಲ್ವ?"

"ಹಾಂ ಹೌದಲ್ವ?"

ಡ್ರೈವರ್ ಸ್ಟೀರಿಂಗ್ ಬಿಟ್ಟು ಕೈ ಮುಗಿದ.

ಬಸ್ಸು ನಿ....ಧಾ....ನವಾಗಿ ಮೆರವಣಿಗೆಯನ್ನು ಹಿಂಬಾಲಿಸತೊಡಗಿತು.

ಹಗ, ಹೆಜೋನ ಮುಖ ನೋಡಿದ. ಹೆಜೋ, ಹಗನನ್ನು ದಿಟ್ಟಿಸಿದ. ಇಬ್ಬರೂ ಡ್ರೈವರ್‌ನನ್ನು ನೋಡಿದರು. ಇಲ್ಲ, ಬಸ್ಸು ಆ ಮೆರವಣಿಗೆಯಲ್ಲಿ ಒಂದಾಗಿ ಸೇರಿಕೊಂಡಿತ್ತು.

"ಏನ್ರೀ ಡ್ರೈವರ್ರೆ ...ಸ್ಪೀಡಾಗಿ ಬಿಡಿ....ಹಾರ್ನ್ ಮಾಡಿ. ಅವರು ದಾರಿ ಬಿಡತಾರೆ...."

ಹಗ ದನಿ ಏರಿಸಿದ.

ಹೆಗೋ ಸುಮ್ನಿ ಎಂದ.

“ಓಗೆ ಹೋದ್ರೆ ಯಾವಾಗ ಊರು ಸೇರೋದು?”

ಡ್ರೈವರ್ ಈ ಇಬ್ಬರನ್ನೂ ಕೆಕ್ಕರಿಸಿ ನೋಡಿದ.

“ಏನ್ ಸಾರ್....ನೀವು ಯೋಳೋದು....ಉತ್ಸ್ವಾರಮ್ಮನ ಪಲ್ಲಕೀನ ಇಂದೆ ಆಕಿ ಓದ್ರೆ....ಆ ಮಾತಾಯಿ ಸುಮ್ಕೆ ಬಿಟ್ಬಾಳ? ಉತ್ಸವ....ನಾಲ್ಕ ಮೈಲಿ ಓಗಿ ಊರ ಮುಟ್ಕತ್ತೆ. ಅಲ್ಲಿಗಂಟ ತಾಯಿ ಇಂದೇನೆ ಓದ್ರಾಯ್ತು....ಸುಮ್ಕಿರಿ....”

ಬಸ್ಸಿನಲ್ಲಿದ್ದ ಇತರರೂ ಈ ಇಬ್ಬರನ್ನು ವಿಚಿತ್ರವಾಗಿ ದಿಟ್ಟಿಸಿದರು.

ಹಗ ಮತ್ತು ಹೆಜೋ ಇಬ್ಬರೂ ಹಲ್ಲು ಕಚ್ಚಿದರು. ಗಡ್ಡದ ಕೂದಲು ಕಿತ್ತರು. ಕೈ ಬೆರಳ ನೆಟಿಗೆ ಮುರಿದರು. ಆಕಳಿಸಿದರು.

ಬಸ್ಸು ನಿ....ಧಾ....ನವಾಗಿ ಸಾಗಿತ್ತು.

ಹಗ, ಹೆಜೋ ಇಬ್ಬರೂ ಮಾತಿಗೆ ತೊಡಗಿದರು. ವೈಚಾರಿಕತೆ. ಮೂಢ ನಂಬಿಕೆ. ಸಮಾಜವಾದ. ಬಂಡಾಯ ಪೆರೆಸ್ಟ್ರೋಯಿಕ. ಗ್ಲಾಸ್‌ನಾಸ್ತ್, ಬ್ರೂಕ್‌ನ ಭಾರತ. ಅಟೆನ್‌ಬರೋ ಗಾಂಧಿ. ಆಲ್ಬರ್ಟ್ ಕಾಮೂ....






“ಇನ್ಮೇಲೆ ಆಟೋ ರಿಕ್ಷಾ ಪೆಟ್ರೋಲ್‌ಗೂ ರಿಸರ್ವೇಷನ್ ಅಂತ ರೇಡಿಯೋದಲ್ಲಿ ಯೋಳ್ತವ್ರೆ. ರಿಕ್ಷಾಗೆ ಕೂಡ ಜಾತಿ ಐತಾ ಗುರೂ?”

# ಸ್ತ್ರೀ ಸಾರಥಿಯರು

—ಶಾಂತಾ ರಘು

---

ಮೊನ್ನೆ ಕಾಂಪೌಂಡ್‌ನಲ್ಲಿ ಓಡಾಡುತ್ತಿದ್ದಾಗ ಮನೆ ಮುಂದೆಯೇ ಪಕ್ಕದ ಮನೆ ಮಾರುತಿ ಹಾದು ಹೋಯಿತು. ನೋಡಿ ಹೌಹಾರಿದೆ. ಡ್ರೈವ್ ಮಾಡ್ತಾ ಇದ್ದೋನು ಹನ್ನೆರಡು ವರ್ಷದ ಅಶ್ವಿನ್! ಚೋಟುದ್ದ ಹುಡುಗ ಆರಾಮಾಗಿ ರೌಂಡ್ ಹೊಡೀತಾ ಇದ್ದ. ತಕ್ಷಣ ನಾನು 20 ವರ್ಷದಲ್ಲಿ ಡ್ರೈವಿಂಗ್ ಕಲಿಯಲು ಪಟ್ಟ ಪಾಡು ನೆನಪಿಗೆ ಬಂದು ನಗು ತಡೆಯದಾಯಿತು.

ನಮ್ಮ ಯಜಮಾನರೇ ಸುಖವಾಗಿ ಹೇಳಿಕೊಡಬಹುದಾಗಿತ್ತು. ಆದರೆ ಪಾಪ, ಅದೇನೋ ನಾನು ಸ್ಟೀರಿಂಗ್ ವ್ಹೀಲ್ ಹಿಡಿದರೇ ಅವರಿಗೆ ಪ್ರಾಣ ಸಂಕಟವಾಗಿ, B.P ಏರ್ತಾ ಇತ್ತು.

ಅಯ್ಯೋ! ಅಲ್ಲೆಲ್ಲೋ ಬಸ್ ಬಂದ್ರೆ ಇಲ್ಯಾಕೆ ಬ್ರೇಕ್ ಹಾಕ್ತೀಯಾ?"

ರಾಮ ರಾಮಾ! ಐವತ್ತಡಿ ದೂರದಲ್ಲಿ ಕತ್ತೆ ರೋಡ್ ಕ್ರಾಸ್ ಮಾಡಿದ್ರೆ ನೀನು ಇಲ್ಲೇ ಕಾರ್ ನಿಲ್ಲಿಸ ಬೇಕೇನೇ?"

ಇದ್ಯಾಕೆ ಇಷ್ಟು ನಿಧಾನವಾಗಿ ಹೋಗ್ತೀಯ? ನೋಡು ಸೈಕಲ್‌ನೋರೆಲ್ಲಾ ಓವರ್‌ಟೇಕ್ ಮಾಡ್ತಾ ಇದಾರೆ!" ಹೀಗೆ ಏನೇನೋ ನಾನ್ ಸ್ಟಾಪ್ ಕಾಮೆಂಟ್‌ಗಳ ಮಾಡೀ ಮಾಡೀ, ಸುಮಾರಾಗಿ ಡ್ರೈವ್ ಮಾಡ್ತಾ ಇದ್ದೋಳು ವಿಪರೀತ ನರ್ವಸ್ ಆಗಿ ಹೋದೆ. ಸರಿ, ಹೀಗಾದರೆ ಈ ಜನ್ಮಕ್ಕೆ ಲೈಸೆನ್ಸ್ ಸಿಗೊಲ್ಲ ಅಂತ ತೀರ್ಮಾನಿಸಿ, ಡ್ರೈವಿಂಗ್ ಸ್ಕೂಲ್‌ಗೆ ಸೇರಿಬಿಟ್ಟೆ.

ನಮ್ಮ ಡ್ರೈವಿಂಗ್ ಟೀಚರ್ ಮಹಾ ನಿಧಾನದವರು. ಭೂಮಿ ತಾಯಿಗಿಂತ ಅಗಾಧ ತಾಳ್ಮೆ.

ಮೇಡಂ, ನೀವು ಹೋಗ್ತಾ ಇರೋದು 20 ಕಿ.ಮಿ. ಸ್ಪೀಡು. ಹಿಂದೆ ಬರ್ತಾ ಇರೋ ಕಾಂಟೆಸಾಗೆ ಯಾಕೆ ಸುಮ್ನೆ ಸ್ಲೋ ಡೌನ್ ಸೈನ್ ಮಾಡ್ತಾ ಇದೀರಾ?

ಪೋಗ್ಲಿ ಬಿಡಿ" "ಪೇಡಂ, Rear view ಕನ್ನಡಿ ಇರೋದು ಹಿಂದೆ ಬರೋ ಗಾಡಿಗಳನ್ನ ನೋಡೋಕೆ. ಹಣೆ ಸ್ಟಿಕರ್ ಹೊಟ್ಟು ಸರಿ ಮಾಡಿಕೊಳ್ಳೋಕೆ ಅಲ್ಲ, ಪ್ಲೀಸ್!" "ಮೇಡಂ, ಇದು ಪೇಟೆ ಬೀದಿ. ನೇರವಾಗಿ ನೋಡಿ ಗಾಡಿ ಬಿಡಿ. 'ಪ್ರಿಯಂದರ್ಶಿನಿ' ಲಿ ಸೇಲ್ ಅಂತ ಬಲಗಡೆ ನೋಡ್ತಾ ಬಿಟ್ರೆ, ಬಿ.ಟಿ.ಎಸ್.ನೋನು ಬಂದು ಬಡಿದು ಬಿಡ್ತಾನೆ ಅಷ್ಟೆ," ಅಂತ ಬಲು ಒಳ್ಳೆಯ ಮಾತಿನಿಂದ ಕಲಿಸಿಕೊಟ್ರು ಪಾಪ.

ಡ್ರೈವಿಂಗ್ ಟೆಸ್ಟ್‌ನಲ್ಲಿ ಎಲ್ಲಾ ಸಲೀಸಾಗೇ ನಡೆಯಿತು. ಚಾಚು ತಪ್ಪದೆ ಎಲ್ಲಾ ನಿಬಂಧನೆಗಳನ್ನೂ, ಸಂಕೇತಗಳನ್ನೂ ನೆನಪಿಟ್ಟುಕೊಂಡು ಡ್ರೈವ್ ಮಾಡ್ತಾ ಇದ್ದೆ. ಕೊನೆಯ ಹತ್ತು ನಿಮಿಷ ಮೌನವಾಗಿ ಕೂತಿದ್ದ ಡ್ರೈವಿಂಗ್ ಪರೀಕ್ಷಕ ಇದ್ದಕ್ಕಿದ್ದ ಹಾಗೆ "ಸ್ಟಾಪ್!" ಎಂದು ಜೋರಾಗಿ ಕೂಗಿದ್ದೇ ತಡ, ಕೈ ಕಾಲು ನಡುಕ ಹುಟ್ಟಿ, ಧಿಡೀರನೆ ಬ್ರೇಕ್ ಹಾಕಿಬಿಟ್ಟೆ. ಹಿಂದೆ ಸಾಲಾಗಿ ಬರ್‍ತಾ ಇದ್ದ ಗಾಡಿಗಳು ಅದು ಹ್ಯಾಗೆ ಬಂದು ಬಡಿಯಲಿಲ್ಲವೋ ಆ ದೇವನೇ ಬಲ್ಲ.

ಬೆವರೊರಿಸಿಕೊಂಡವರು, "ಮೇಡಂ, ಇದೇನಿದು? ಸ್ಟಾಪ್ ಮಾಡ ಬೇಕಾದ್ರೆ, ಕೈಯಿಂದ ಸಿಗ್ನಲ್ ತೋರ್‍ಸಿ, ನಿಧಾನವಾಗಿ ಎಡಗಡೆಗೆ ಹೋಗಿ ನಿಲ್ಲಿಸಬೇಕು," ಅಂದ್ರು.

ನಾನೂ ಬೆವರೊರಸಿಕೊಳ್ಳುತ್ತಾ "ಸಾರಿ, ನೀವು ಹಾಗೆ ಬೆಚ್ಚಿ ಬೀಳೋ ಹಾಗೆ ಕೂಗಿ ಬಿಟ್ರಿ, ನಂಗೆ ಗಾಬರಿಯಾಯ್ತು" ಅಂತ ನಿಜ ಹೇಳಿದೆ.

ಲೇಡಿ ಡ್ರೈವರ್‌ಗಳಿಗೆ ಅದೆಷ್ಟೋ ಅನುಕೂಲಗಳಿವೆ. ಹೀಗೇ ಒಂದು ಸಲ ಮಲ್ಲೇಶ್ವರಂಗೆ ಹೋಗ್ತಾ ಇದ್ವಿ. ಆರು ದಾರಿ ಕೂಡುವ ಸರ್ಕಲ್. ನಮ್ಮ ಬಲಗಡೆ ಬಲು ಜೋರಾಗಿ ಒಂದು ಫಿಯಟ್ ನಮ್ಮನ್ನ ಹಾದು ಹೋಯಿತು. ಡ್ರೈವ್ ಮಾಡ್ತಾ ಇದ್ದ ನಮ್ಮ ಮಗಳೂ ಸೀದಾ ಬಿಡ್ತಾನೇ ಇದ್ದಳು. ಕರ್ಣಕಠೋರವಾಗಿ "ಭರೀಲ್" ಅಂತ ಶಬ್ದ ಕೇಳಿಸಿತು. ಎರಡು ಕಾರಿನವರೂ ಬ್ರೇಕ್ ಹಾಕಿದೆವು. ಫಿಯಟ್ ಮಹಾಶಯರು ಕೋಪಾವೇಶದಿಂದ ಕಾರಿನಿಂದ ಧುಮುಕಿ ಓಡೋಡಿ ಬಂದರು. ಪಾಪ, ಅವರ ಕಾರಿನ ಪಾರ್ಕಿಂಗ್ ಲೈಟ್ ಹತ್ತಡಿ ದೂರ ಎಗರಿ ಬಿದ್ದಿತ್ತು. ನಿಘಂಟಿನಲ್ಲಿದ್ದ ಒಳ್ಳೆಯ ಬಯ್ಗುಳನ್ನೆಲ್ಲ ನಾಲಿಗೆಯ ತುದಿಯಲ್ಲಿ ರೆಡಿ ಮಾಡಿಕೊಂಡಿದ್ದರೇನೊ? ಬಂದು ನೋಡಿದರೆ ನಮ್ಮ ಡ್ರೈವಿಂಗ್ ಸೀಟಿನಲ್ಲಿ ಹೈಸ್ಕೂಲು ಹುಡುಗಿ

ಯಂತಿದ್ದ ಪುಷ್ಟಿ ಲೇಡಿ! ಹಸುಳೆಯಂತಿದ್ದ ಮುಖದಲ್ಲಿ ಜೀವಂಳಿದಿತ್ತು. (ಈ ಮಗು ಮುಖದ ಮಾಗಿಗೆ ಆಗಲೇ 25 ವರ್ಷ ಲಾಸ್ ಏಂಜಲೀಸ್‌ನಲ್ಲಿ ಗಣಿತದ Ph.D. ಮಾಡ್ತಾ ಇದಾನೆ ಅಂತ ಅವರಿಗೆ ಗೊತ್ತಿರಲು ನ್ಯಾಯವಿಲ್ಲ!)ಫಿಯಟ್ ಯಜಮಾನರ ಮುಖದಲ್ಲಿ ಮಹತ್ತಾದ ಬದಲಾವಣೆ! ಪರಿತಾಪಕರವಾಗಿ ಮುಖ ಮಾಡಿಕೊಂಡು "ಏನಮ್ಮಾ ಮಗೂ! ಹೀಗೆ ಮಾಡಬಹುದೇ ನೀನು? ಸ್ವಲ್ಪ ಅಚೆ ಈಚೆ ನೋಡಿ ಡ್ರೈವ್ ಮಾಡಬಾರದೆ? ನಂಗೆ ಎಷ್ಟು ಖರ್ಚು ನೋಡು ಈಗ" ಅಂತ ಬಲು ವ್ಯಥಪಟ್ಟರು. ಎಲ್ಲಿ ಅತ್ತೇ ಬಿಡ್ತಾರೋ ಅಂತ ಗಾಬರಿಯಾಯಿತು. ಒಟ್ಟಿನಲ್ಲಿ ಪ್ರಸಂಗ ಸಮಾಧಾನವಾಗಿ ಮುಕ್ತಾಯವಾಯಿತು. ಅದೇ, ಹೊರವಾಗಿ ಮೀಸೆ ಬೆಳೆಸಿರುವ ನನ್ನ ಮಗ ಡ್ರೈವ್ ಮಾಡ್ತಾ ಇದ್ದ ಅಂತ ಇಟ್ಕೊಳ್ಳಿ. ಬಿಸಿ ಬಿಸಿ ಲಟಾಪಟಿ ನಡೀತಾ ಇರಲಿಲ್ವೆ ಅಲ್ಲಿ ? !

ನನ್ನ ಗೆಳತಿ ಗಿರಿಜಾದು ಇನ್ನೂ ತಮಾಷೆ. M.G. ರೋಡಿನ ಕಾವೇರಿ Arts & Handicraftsನ ಮುಂದಿದ್ದ ಸರ್ಕಲ್‌ನಲ್ಲಿ ಸ್ಟಾಪ್ ಲೈಟಿಗೆ ನಿಂತಿದ್ದಳು. ತಪ್ಪು ಲೇನ್‌ನಲ್ಲಿ ಸುಖವಾಗಿ ನಿಂತಿದ್ಲು. ಸಿಗ್ನಲ್ ಬಂದಾಗ ಹಿಂದಿದ್ದ ವಾಹನಗಳಿಗೆಲ್ಲಾ ಅಡ್ಡ. ಹಾರನ್‌ಗಳು ಒಂದೇ ಸಮನೆ ಬಡಿದುಕೊಂಡಿದ್ದರೂ ನಿಂತೇ ಇದ್ದಳು. ಕರ್ಕಶವಾಗಿ "ಭಾಂ, ಭಾಂ" ಎಂದು ಹಾರನ್ ಹೊಡೆದೂ ಹೊಡದೂ ಸಾಕಾದ ಹಿಂದಿದ್ದ ಆಟೋದವ ದಢದಢನೆ ಇಳಿದು ಬಂದು, "ಏನ್ರೀ ಮೇಡಂ, ನಿಮಂಗೆ ಸಿಗ್ನಲ್ ಬಂದು ಹೊರಡೋ ತನಕ ನಾವಲ್ಲಾ ಕೈ ಕಟ್ಟಿ ಕಾಯ್ತಾ ನಿಂತಿರಬೇಕೇನ್ರೀ?" ಅಂತ ಕೂಗಿದ್ದೇ ತಡ.... ಗಿರಿಜಾ ತಕ್ಷಣ ಇಳಿದು ಆಕಾಶ ನೋಡ್ತಾ ನಿಂತಿದ್ದ ಟ್ರಾಫಿಕ್ ಪೋಲೀಸಿನವನನ್ನ ಕರೆದಳು. "ನೋಡ್ರೀ ಇವರ್ನ! ಬೆಚ್ಚಿ ಬೀಳೋ ಹಾಗೆ ಹತ್ರ ಬಂದು ಹಾರನ್ ಹೊಡದದ್ದೂ ಅಲ್ದೆ....ಇನ್‌ಸಲ್ಟಿಂಗಾಗಿ ಬೇರೆ ಮಾತಾಡ್ತಾರೆ!" ಅಂತ ದೂರಿದಳು. ಪೋಲೀಸಿನವನೂ ಹಿಂದೆ ಮುಂದೆ ನೋಡದೆ "ಏನ್ರೀ! ಲೇಡೀಸ್ ಹತ್ರ ಬಿಹೇವ್ ಮಾಡೋಕೆ ಬರೊಲ್ವೆ? Fine ಕೊಡೋಕೆ ಆಸೆ ಆಗಿದ್ಯೋ ಹೇಗೆ?" ಅಂತ ಆಟೋದವನ್ನ ದಬಾಯಿಸಿದರು. ಪಾಪ, ಆಟೋದವ ತೆಪ್ಪಗೆ ಹೋಗಿ ತನ್ನ ವಾಹನದಲ್ಲಿ ಕೂತ. "ಅಯ್ಯೋ ಶಿವನೆ! ಹೆಣ್ಮಕ್ಕಳೆಲ್ಲಾ ಸಿಕ್ಕಾಪಟ್ಟೆ ಕಾರು ಬಿಡೋಕೆ ಬಂದು ನಮ್ಮ ಕಂತ್ರಿಗೇಗೇ ಬಂತಲ್ಲಪ್ಪಾ. ಇವ್ರೆಲ್ಲಾ ಸುಮ್ನೆ ಮನೆ, ಮಠ, ಗಂಡ್ನಾಂತ ಮನೇಲೇ ಕುಂತಿರಬಾರದೆ?" ಅಂತ ಜೋರಾಗಿ ಹಲುಬಿದ.

ನಮ್ಮ ಪರಿಚಯದವರಾದ ಶ್ರೀಮತಿ ಅದ್ವಾನಿ ತಮ್ಮ ಪುಟ್ಟ Dolphin ಕಾರನ್ನು ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದರು. 80 ಕೆ. ಜಿ. ಯವರು ಆ ಪುಟಾಣಿ ಕಾರೊಳಗೆ ಅದು ಹೇಗೆ ತೂರುತ್ತಿದ್ದರೋ, ಅದು ಹೇಗೆ ಹೊರಗೆ ಬರ್ತಾ

ಇದ್ಯೋ ಆ ಭಗವಂತನಿಗೇ ಗೊತ್ತು! ಬಲು ದಬ್ಬಾಗಿ ಡ್ರೈವ್ ಮಾಡ್ತಾ ಇದ್ರು ದಾಕ್ಟ್ರಿನ್ನನ್ನ. ಮಕ್ಕಳು ಮರಿಗಳಿಗೆ ಸ್ನಾನವಾಗುತ್ತಿತ್ತೋ ಇಲ್ವೋ, ಕಾರಿಗೆ ದಿನಾ ಲಕ್ಷಣವಾಗಿ ಮಂಗಳ ಸ್ನಾನ ತಪ್ಪಿದ್ದಲ್ಲ. ಒಂದು ಸಾರಿ ಅರ್ಜೆಂಟಿಗೆ ಅವರ ಪತಿ ಮಡದಿಯ ಕಾರನ್ನು ಉಪಯೋಗಿಸಲು ನಿರ್ಧರಿಸಿ, ಸ್ಟಾರ್ಟ್ ಮಾಡಿದರೆ, ಕಾರು ಏಕೋ ಮುನಿಸಿಕೊಂಡು ಮೌನವಾಗಿ ಸ್ಟ್ರೈಕ್ ಮಾಡಿತು.

"ಅಯ್ಯೋ! ಇದೊಂದು ಕಾರ? ಶುದ್ಧ ಡಬ್ಬ!" ಅಂತ ಬಯ್ತಾ ಇದ್ರು. ಸಿಟ್ಟು ಬಂತು ಅರ್ಧಾಂಗಿಗೆ. "ನಿಮಗೇನು ಗೊತ್ತು ನನ್ನ ಕಾರಿನ ವಿಷ್ಯ? ನಾಲ್ಕು ಸಲ ಸ್ಟಾರ್ಟ್ ಆಗದೇ ಹೋದ್ರೆ ಐದನೇ ಸಲ ಹೀಗ್ಮಾಡ್ಬೇಕು!" ಅಂತ ಡಾಲ್ಫಿನ್ನಿನ ಮೂತಿಯ ಮೇಲೆ ತಮ್ಮ ಮೃದು ಪಾದಗಳಿಂದ ಒಂದು ಭರ್ಜರಿ ಒದೆ ಕೊಟ್ಟರು. ಅಷ್ಟೆ! ಕಾರು ಬಲು ವಿಧೇಯವಾಗಿ ಸ್ಟಾರ್ಟ್ ಆಗಿ ಗರ್ಜಿಸಿತು! ಹೀಗೆ ಕಾರಿನ ಒಂದೊಂದು ಐಬಿಗೂ ಒಂದೊಂದು ಮದ್ದು ಇಟ್ಟಿದ್ದರು ಶ್ರೀಮತಿ ಅದ್ವಾನಿ. ಯಾವ ಜಂಟಲ್‌ಮನ್ ಡ್ರೈವರ್‌ಗಾದ್ರೂ ಹೀಗೆಲ್ಲಾ ಹೊಳೆಯಲು ಸಾಧ್ಯವೆ?

ನಮ್ಮ ಮಾಲತಿ ಒಂದು ಸಲ ಪೆಟ್ರೋಲ್ ಬಂಕಿಗೆ ಹೋದಾಗ ಹನುಮಂತನ ಬಾಲದಂತೆ ಕ್ಯೂ ನಿಂತಿತ್ತು. ಏನಿಲ್ಲಾಂದ್ರೂ ಅರ್ಧ ಗಂಟೆ ಆಗಬಹುದು. ನೋಡಿದಳು ನನ್ನ ಗೆಳತಿ. ಥಟ್ಟನೆ ಇಳಿದು ಬಿಲ್ ಮಾಡುತ್ತಾ ಇದ್ದವನ ಹತ್ತಿರ ಹೋದಳು. "ರೀ! ಪ್ಲೀಸ್! ಗಂಟೆ 12 ಆಗೋಯ್ತು. ನನ್ನ ಮಗೂನ ಬೇಬಿ ಕ್ಲಾಸಿಂದ ಕರಕೊಂಡು ಬರಬೇಕು. ನಾನು ಬೇಗ ಹೋಗ್ದೇ ಇದ್ರೆ ಬೀದೀಗೇ ಬಂದು ಬಿಡತ್ತೆ. ಇನ್ನೂ ಮೂರೇ ವರ್ಷ ಅಯ್ಯೋ! ಏನ್ಮಾಡಲಿ? ಸ್ವಲ್ಪ ನನ್ನ ಗಾಡೀಗೆ ಪೆಟ್ರೋಲ್ ಹಾಕಿ ಕೊಟ್ಬಿಡೀಪ್ಪಾ" ಅಂತ ಕಲ್ಲೂ ಕರಗುವಂತೆ (ನಿಜವನ್ನೇ) ಹೇಳಿದಳು. ಅದೇನು ಮಾಯವೊ! ಬಂಕಿನವನಿಗೆ ಅದು ಹ್ಯಾಗೆ ದಯೆ ಉಕ್ಕಿ ಬಂತೋ.... ಹೇಗೋ ಮಾಡಿ ಅವಳ ಗಾಡೀನ ಮುಂದೆ ತಂದು ಪೆಟ್ರೋಲ್ ಹಾಕಿ ಕಳಿಸಿಕೊಟ್ಟ. ಹಿಂದಿದ್ದವರೆಲ್ಲಾ ಬೊಬ್ಬೆ ಹೊಡೆದರೂ ಅನ್ನಿ! ಸ್ತ್ರೀ ಸಹಜ ಚಾತುರ್ಯ ಸಮಯಕ್ಕೆ ಸಹಾಯ ಮಾಡಿತು ಮಾಲತಿಗೆ. ಗಂಡು ಡ್ರೈವರುಗಳಿಗಿಂತ ಅವಳಿಗೇ ಸಮಯೋಚಿತ ಬುದ್ಧಿ ಜಾಸ್ತಿ ಇತ್ತು ಅನ್ನೋದು ನಿಜ ತಾನೆ?

ಮಹಿಳಾ ಚಾಲಕಿಯರೆಂದರೆ ಎಷ್ಟೋ ಜನಕ್ಕೆ ಒಂದು ಥರಾ ತಾತ್ಸಾರ. ಜಯನಗರದ 4ನೆಯ ಬ್ಲಾಕ್ ಸರ್ಕಲ್‌ನಲ್ಲಿ ರೆಡ್ ಲೈಟ್ ನೋಡಿ ಡ್ರೈವಿಂಗ್ ಸ್ಕೂಲಿನ ಮಾರುತಿ ಕಾರೊಂದು ಥಟ್ಟನೆ ನಿಂತಿತು. ಹಿಂದೇನೇ ಬರ್‍ತಾ ಇದ್ದ

ಮಾಲತಿ ಸ್ವಲ್ಪ ಅಜಾಗರೂಕತೆಯಿಂದ ಬ್ರೇಕ್ ಹಾಕಿದ್ದರಿಂದ, ಮುಂದಿದ್ದ ಕಾರನ್ನು ಅವಳ ಮಾರುತಿ ಬಲು ಪ್ರೀತಿಯಿಂದ ಆಲಂಗಿಸಿತು. ಮುಂದಿನ ಸೀಟಿನಿಂದ ದೂರ್ವಾಸರ ವಂಶಜರಂತಿದ್ದ ಒಬ್ಬಾತ ಇಳಿದು ಬಂದರು. "ಏನ್ರೀ ಮೇಡಂ! ಸರಿಯಾಗಿ ಬ್ರೇಕೂ ಹಾಕೋಕೆ ಬರೊಲ್ಲ. ಗಾಡಿ ತಗೊಂಡು ಧೈರ್ಯವಾಗಿ ಬಂದುಬಿಡ್ತೀರಲ್ಲ!" ಅಂದರು ಬಲು ವ್ಯಂಗ್ಯವಾಗಿ. ಮಾಲತಿ ಖುಷಿಯಾಗಿ ತಲೆ ಹೊರಗೆ ಹಾಕಿ, "ನಮಸ್ಕಾರಾ ಸಾರ್! ನನ್ನ ಗುರುತು ಸಿಗಲಿಲ್ವೆ? ನೀವೇ ನನಗೆ ಡ್ರೈವಿಂಗ್ ಹೇಳಿಕೊಟ್ಟೋರು!" ಅಂದಳು ಸಂಭ್ರಮದಿಂದ.



ಸೈಟಗಳು ಅಪ್ರಿಸಿಯೇಟ್ ಆಗ್ತಾ ಇರೋವಾಗ ಸ್ಟಾಫ್‌ನ ಅಪ್ರೀಸಿಯೇಟ್ ಮಾಡ್ದೇ ಇದ್ರೂ ಖುಷಿಯಾಗೇ ಇರ್ತಾರೆ ಅಲ್ವೇ!

# ಭಾರತ ಕಥಾ ಮಂಜರಿ

—ಅ.ರಾ.ಸೇ.

---

ಚೋಪ್ರ ಅವರ ಭಾರತ ಕೊನೆಗೊಮ್ಮೆ ಮುಗಿಯಿತು. ಹೇಗಿತ್ತು ಎಂಬ ಪ್ರಶ್ನೆ ಅರ್ಥವಿಲ್ಲದ್ದು. ಯಾರಾದರೂ ಹೇಳಿದ್ದನ್ನು ಕೇಳುವ, ಡೊಂಕನ್ನು ತಿದ್ದಿಕೊಳ್ಳುವ ಸಮಯ ಈಗಿಲ್ಲ. ಟಿ.ವಿ. ಧಾರಾವಾಹಿ ತಯಾರಿಸಲು ಬೇಕಾದದ್ದು ಮಹಾಭಾರತದ ಸಂದೇಶವಲ್ಲ ಎನ್ನುವುದನ್ನು ಟೀಕಾಕಾರರು ನೆನಪಿಟ್ಟುಕೊಳ್ಳುವುದು ಅವಶ್ಯಕ. ಬೇಕಾದದ್ದು ಹಣ, ಪ್ರಾಯೋಜಕರ, ಮಂಡಿಹೌಸ್‌ನ ಆಶೀರ್ವಾದ. ನೋಟಕರ ಸಂಖ್ಯೆ. ನೋಟಕರು ಎಂದರೆ ಪ್ರಾದೇಶಿಕ ಮಹಾನಗರಗಳ ನೋಟಕರಲ್ಲಿ ಸರ್ವೇಕ್ಷಣಕ್ಕೆ (ಸರ್ವೆ) ಆಯ್ದುಕೊಂಡವರು ಮಾತ್ರ. ಅದಾದ ಮೇಲೆ ವಿಡಿಯೋ ಟೇಪ್‌ಗಳ ಮಾರಾಟದ ಹಣ, ಆಯ್ದ ವಿಮರ್ಶಕರ ಹೊಗಳಿಕೆ, ಹಿಂದೆ ಬಿದ್ದವರ ತೆಗಳಿಕೆ, ಇತ್ಯಾದಿ. ಮಹಾಭಾರತ, ನಮ್ಮ ಪ್ರಸ್ಸಿ ಷೂಟ್ ಮಾಡಿದ ಕತೆ(ತ್ತೆ), ಎರಡೂ ಒಂದೇ. ಹೆಚ್ಚು ರೊಕ್ಕ ಕಮಾಯಿಸಿದವನೇ ಧೀರ. ಅವನು ಆಡಿದ್ದೇ ಆಟ.

ಮಹಾಭಾರತದ ಪರಿಚಯ ಉತ್ತರ ಭಾರತದವರಿಗೆ ಸಾಕಷ್ಟಿಲ್ಲ. ಕುಮಾರವ್ಯಾಸ ಭಾರತ ಕನ್ನಡದಲ್ಲಿದೆ. (ದೇವರ ದಯೆಯಿಂದ ಹಿಂದಿಯಲ್ಲಿಲ್ಲ.) ಹೀಗಾಗಿ ಕುಮಾರವ್ಯಾಸ ಭಾರತ ಓದಿದವರು, ಮೆಚ್ಚಿಕೊಂಡವರು, ಅಲ್ಪ ಸಂಖ್ಯಾತರು. ಇದು ಬಹುಮಂತದ ಕಾಲ. ಕುಮಾರವ್ಯಾಸ ಭಾರತ ಓದಿ ಮೆಚ್ಚಿಕೊಂಡವರು ಟಿ.ವಿ. ಭಾರತವನ್ನು ಕೇವಲ ಸಂಸ್ಕೃತದಲ್ಲೇ ವಿಮರ್ಶಿಸುತ್ತಾರೆ. ಅವರಿಗೆ ತಾಳ್ಮೆ ಸಾಲದು.

ಹಾಗೇ ಯೋಚಿಸಿ ನೋಡಿ

ಶಕುನಿಯ Lovable villian ಚಿತ್ರಣ ಭಾರತಕ್ಕೆ ಅವಶ್ಯಕವೇ? ಇನ್ನೂ ಸಾಬೀತಾಗದ ಡೆಮಾಕ್ರಸಿಯ ಹಿರಿಮೆಯನ್ನು ಭಾರತ ಸಾರುತ್ತದೆಯೋ? ಧೃತರಾಷ್ಟ್ರನನ್ನು ಉದ್ದಕ್ಕೂ ನೋಡುವುದಕ್ಕಾಗಿ ಭಾರತ ನೋಡಬೇಕೇ? ದುರ್ಯೋಧನ, ಭೀಮ ಹಾಗೆ ಇದ್ದಿರಬಹುದೇ? "ಆಲಿ ಕಿಡಿಯಿಡೆ ಕುಣಿವ ಮೀಸೆ, ಕರಾಳ ವದನದ ಬಿಗಿದ ಹುಬ್ಬಿನ" ಭೀಮನಲ್ಲಿ, ನಾವು ನೋಡಿದವನಲ್ಲಿ? ಭೀಷ್ಮ ತನ್ನನ್ನು 'ಅನ್ನಕ್ಕಾಗಿ ಪರರ ಸೇವೆಯನ್ನು ಮಾಡುವ ಪುರುಷಾಧಮನೆಂದು' ಭಾವಿಸುತ್ತಾನೆ ಅಷ್ಟೇ. ವಸ್ತ್ರಾಪಹರಣ,, ಅರಗಿನ ಮನೆ, ಕಪಟ ದ್ಯೂತ ಸೋದರ ಹನನಗಳಿಗೆ

'ಉತ್ತರಾಧಿಕಾರ' ತನ್ನದೆಂದು ಭಾವಿಸುವುದಿಲ್ಲ. ಅದಿರಲಿ ಭೀಷ್ಮನು ಶಪಥ ಮಾಡಿದ್ದು 'ಇಂದಿನಿಂದ ಸ್ತ್ರೀಯರೆಲ್ಲರೂ ನನಗೆ ಗಂಗಾದೇವಿಯ ಸಮಾನ' ಎಂದು. ಅದಕ್ಕಾಗಿ ಅವನೆಂದೂ ಪರಿತಪಿಸಲಿಲ್ಲ. ಹೀಗೆ ಮೂಲ ಮೂರ್ತಿಯನ್ನು ಮಾರಿ, ಜಾತ್ರೆ ನಡೆಸುವ ಕೆಲಸ ಹತ್ತಲ್ಲ, ಹಲವಾರು ಸಂದರ್ಭಗಳಲ್ಲಿ ನಡೆದಿದೆ. ಇದನ್ನು ವಿಶ್ಲೇಷಿಸುವ ಬದಲು, ಓದುಗರು ಕುಮಾರವ್ಯಾಸ ಭಾರತವನ್ನು ಒಂದಲ್ಲ, ಹತ್ತು ಬಾರಿ ಓದುವುದು ಅವರ ಜೀವನಕ್ಕೆ ದಾರಿದೀಪವಾದೀತು. ಆದರೆ ಜೀವನಕ್ಕೆ ಸನಾತನವಾದ, ನಿರಂತರವಾದ ದಾರಿ ದೀಪ ಸಿಕ್ಕುಬಿಟ್ಟರೆ ಗತಿಯೇನು ಎಂಬ ಭಯ ನಮಗಿದೆ.

ಆದುದರಿಂದ ಒಮ್ಮೆ ಹಿಂದೆ ನಾವು ಕುಮಾರವ್ಯಾಸ ಭಾರತವನ್ನು ಓದಲು ಆರಂಭಿಸಿದಾಗ ನಡೆದ ಕೆಲವು ಘಟನೆಗಳನ್ನು ಇಲ್ಲಿ ತಮ್ಮ ಅವಗಾಹನೆಗೆ ತರಲಿದ್ದೇವೆ — ಧಾರಾವಾಹಿಯಾಗಿ.

* • *

ಬಹುಶಃ ಮೂವತ್ತರ ದಶಕದ ಕೊನೆ ಅಥವಾ ನಲವತ್ತರ ದಶಕದ ಆರಂಭದಲ್ಲಿ ನಡೆದದ್ದು. ಯುದ್ಧ ಆರಂಭವಾಗಿತ್ತು. ರೇಷನ್ ಆಗ ತಾನೇ ಜಾರಿಗೆ ಬಂದಿತ್ತು. ರೂಪಾಯಿಗೆ ನಾಲ್ಕು ಸೇರೇ ಅಕ್ಕಿ ಆಯಿತಲ್ಲ; ಜೀವಿಸುವುದು ಹೇಗೆ ಎಂದು ನಮ್ಮ ತಂದೆ ತಾಯಿ ಚಿಂತಾಕ್ರಾಂತರಾಗಿದ್ದರು. ಆದರೆ ಒಂದೆರಡು ಪಲ್ಲ ರಾಗಿ, ಜೋಳ ಕಡ ತೆಗೆದುಕೊಳ್ಳುವುದು, ಕೊಡುವುದು ರೂಢಿಯಲ್ಲಿತ್ತು. ಕೊಟ್ಟವರ ಗಂಟನ್ನು ಹಿಂದಿರುಗಿಸುವವರೇ ಬಹುಸಂಖ್ಯಾಕರಾಗಿದ್ದರು.

ನಮ್ಮ ಹಿರಿಯರಿಗೆ ಇದ್ದ ಇನ್ನೊಂದು ಚಿಂತೆ ಎಂದರೆ ನಾವು. (ಎಂದರೆ ಹುಡುಗರು.)

"ಈ ಮುಂಡೇಗಂಡರು ಮನುಷ್ಯರಾದಾರೇ? ಬಾಳೇವು ಮಾಡಿಯಾರೇ? ಈ ಅವಿವೇಕರಿಗ ಎಂದಾದರೊಂದು ದಿನ ವಿವೇಕ ಬಂದೀತೇ?" ಎಂದು ಅವರು ಒಬ್ಬರನ್ನೊಬ್ಬರು ಕೇಳುತ್ತಿದ್ದರು.

ಒಂದು ದಿನ ನಮ್ಮ ಅಪ್ಪ, ಸೂರಪ್ಪ, ಗಂಡ ಮಾವ, ಪುಟ್ಟಪ್ಪ ಮೊದಲಾದವರು ಯಥಾಪ್ರಕಾರ ಕಾಲ ಕೆಟ್ಟಿರುವ ರೀತಿಯನ್ನು ವಿಶ್ಲೇಷಿಸುತ್ತಾ ಕುಳಿತಿದ್ದರು. ಆಗ ತಾನೇ ಭಾಯಣ್ಣ, ಸುಬ್ಬಣ್ಣ ಓದು ಮುಗಿಸಿ ಊರಿಗೆ ಬಂದಿ

ದ್ದರು. ನಮ್ಮೂರಿನ ಹನುಮಪ್ಪನ ಗುಡಿ ಓದಿಸಿದ ಭಾರತ, ರಾಮಾಯಣಗಳಿಗೆ ಪ್ರಸಿದ್ಧಿ. "ನಮ್ಮ ದಾಸಪ್ಪ ಓದಬೇಕು: ನಂಜುಂಡಪ್ಪ ಅರ್ಥ ಹೇಳಬೇಕು. ಅದೂವೆ ಭಾರತ ಅಂದ್ರೆ! ಇವಕ್ಕೆ ಭಾರತವೂ ಬೇಡ, ರಾಮಾಯಣ ಮೊದಲೇ ಬೇಡ. ಇವನ್ನು ಒದ್ದು ಓಡಿಸಬೇಕು" ಎನ್ನುವುದು ಬಹುಮತ. ಯಾರೋ ಒಬ್ಬರು ''ಇದ್ದ ಇವನ್ನು ಒದ್ದು ಕಾಡಿಗೆ ಓಡಿಸಿದರ, ಈಗಲೇ ಮೃಗಗಳಾಗಿವೆ. ಆಮೇಲೆ ಕಾಡು ಮೃಗಗಳಾಗುತ್ತವೆ" ಎಂದರು.

ಆಗ ಸೂರಪ್ಪ "ದೃಷ್ಟಿಪ್ಪ ಓದಲಿ, ರಾಮಣ್ಣ ಅರ್ಥ ಹೇಳಲಿ, ನಾನು ಕೇಳುತ್ತೇನೆ" ಎಂದ. ಗುಂಡ ಪಾಪ ''ನಿನಗೆ, ಗೋಡೆಗೆ, ಹೇಳಿದರೆ ಏನು ಬಂತು?'' ಹುಡುಗರಿಗೆ ಓದುವುದನ್ನು, ಅರ್ಥ ಹೇಳುವುದನ್ನು ಕಲಿಸಿದರೆ ಸಾರ್ಥಕ" ಎಂದ.

ಆಗ ಯಾರೋ ''ನಾನೇ ಒಲ್ಲೆ ಅಂದರೆ, ನಮ್ಮಪ್ಪ ಯಾರಿಗೆ ಮದುವೆ ಮಾಡುತ್ತಾನೆ. ಹುಡುಗರು ಉತ್ಸಾಹದಿಂದ ಮುಂದೆ ಬಂದರೆ ಚಂದ" ಎಂದರು.

ಹಾಗೂ ಹೀಗೂ ನಮ್ಮೆಲ್ಲರನ್ನೂ ಗುಡಿಯಲ್ಲಿ ಜಮಾಯಿಸಿ, ನಮಗೆಲ್ಲಾ ಭಾರತದ ಮಹಿಮೆಯನ್ನು ಬೋಧಿಸಿದರು.

ಭಾರತದಲ್ಲಿ ಒಂದು ಅಕ್ಷರವನ್ನು ಕೇಳಿದರೆ ೧. ವೇದ ಪಾರಾಯಣದ, ೨. ಗಂಗಾ ಸ್ನಾನದ, ೩. ಕೃಚ್ಛ್ರದ, ೪. ಜ್ಯೋತಿಷ್ಟೋಮದ, ೫. ಭೂ, ವಸ್ತ್ರ, ಕನ್ಯಾ ದಾನಗಳ ಫಲ ದೊರೆಯುತ್ತದೆ.

ಹಿರಿಯರ ಕೈಲಿ ಬೈಸಿಕೊಂಡು, ಹತಾಶರಾಗಿ, ಬೇಸತ್ತು, ಜೀವನದಲ್ಲಿ ನಮ್ಮಿಂದ ಏನೂ ಸಾಧಿಸಲಾಗುವುದಿಲ್ಲ ಎಂದು ದೃಢವಾಗಿ ನಂಬಿದ್ದ ನಮಗೆ ಕಷ್ಟ ವಿಲ್ಲದೆ ದುಸ್ಸಾಧ್ಯವಾದ ಕರ್ಮಗಳನ್ನು ಮಾಡಿದ ಫಲ ದೊರಕುವುದೆಂಬ ಆಸೆ ಬಂತು. ಮಹೋತ್ಸಾಹ ಮೂಡಿತು. ಈ ಪ್ರಸಂಗ, ಭಾರತ ಶ್ರವಣದ ಫಲ ಹೇಗೆ ಹೊರ ಹೊಮ್ಮಿತು ಎಂಬುದನ್ನು ಕುರಿತದ್ದು. ಭಾರತ ವಾಚನ ಆರಂಭವಾದದ್ದು ಹೇಗೆ ಎನ್ನುವುದನ್ನು ಅನಂತರ ಹೇಳೋಣ.

ಭಾರತ ವಾಚನ ಆರಂಭವಾಯಿತು. ಆರು ತಿಂಗಳು ಕಳೆದಿರಬಹುದು ಒಂದು ದಿನ ಜಿಟಿ ಜಿಟಿ ಮಳೆ ಹಿಡಿದಿತ್ತು. ತಂಗಾಳಿ ಬೀಸುತ್ತಿತ್ತು ಗುಡಿಯಲ್ಲಿ ನಾವು ಕುಳಿತು ಗುಜುಗುಜು ಮಾಡುತ್ತಿದ್ದೆವು

ನಮಗೆ ಎಷ್ಟು ಫಲ ಬಂದಿದೆ ಎಂದು ಲೆಕ್ಕ ಹಾಕಿದೆವು. ಒಂದು ದಿನಕ್ಕೆ ಸರಾಸರಿ ೪೦ ಪದ್ಯ. ಒಂದು ಪದ್ಯದಲ್ಲಿ ಸರಾಸರಿ ೮೦ ಅಕ್ಷರ. ನೂರೆಂಬತ್ತು ದಿನಕ್ಕೆ ೧೮೦×೪೦×೪೦ ಎಂದರೆ ೨,೮೮,೦೦೦ ಬಾರಿ ವೇದ ಪಾರಾಯಣ ಮಾಡಿದ, ಅಥವಾ ಅಷ್ಟೇ ಜ್ಯೋತಿಷ್ಟೋಮ ಯಾಗ ಮಾಡಿದ, ಕೃಚ್ಛ್ರವನ್ನು ಮಾಡಿದ ಫಲ ದೊರಕಿದೆ.

'ಕೃಚ್ಛ್ರ ಎಂದರೇನು?' ಎಂದು ನಾನು ಕೇಳಿದೆ.

'ಸಣ್ಣ ಹುಡುಗರಿಗೆ ಅದೆಲ್ಲಾ ಯಾಕೆ? ಕುಕ್ಕರುಬಡ್ಯೋ, ತಲೆಹರಟೆ ಎಂದು ಉತ್ತರ ಬಂತು.

''ವೇದ ಪಾರಾಯಣ ಯಜ್ಞಗಳನ್ನು ಮಾಡಿದರೆ ಸ್ವರ್ಗ ಸಿಗುತ್ತದೆ. ಅದೆಲ್ಲಾ ಸತ್ತ ಮೇಲೆ. ಈಗ ನಾವು ವಿವೇಕಿಗಳಾಗಬಹುದು, ಭಕ್ತಿ ಸಂಪಾದಿಸಬಹುದು" ಎಂದು ನಮ್ಮಪ್ಪ ಹೇಳಿದ. ವಾಚಕ ಪುಟ್ಟಪ್ಪ ಗುಡಿಯ ಬಾಗಿಲಲ್ಲಿ ನಿಂತು ಕದವನ್ನು ಬಲಗೈಯಿಂದ ಹಿಡಿದುಕೊಂಡು

"ಅವಿವೇಕಿ ಮುಂ........ರ್ರಾ, ನಿಮಗೆ ನಂಬಿಕೆ ಇಲ್ಲ. ಶ್ರದ್ಧೆ ಇಲ್ಲ, ಶ್ರೀ ಹರಿಯಲ್ಲಿ ಭಕ್ತಿ ಇಲ್ಲ, ಅದಕ್ಕೇ ನಿಮಗೆಲ್ಲಾ ಕಜ್ಜಿ ದೆ, ತುರಿ ಬಂದಿದೆ, ಅವನಿಗೆ ಜ್ವರ ಬಂತು, ಇನ್ನೊಬ್ಬನು ಮರದಿಂದ ಬಿದ್ದು ಕಾಲು ಮುರಿದುಕೊಂಡ. ನಿಮಗೆ ಭಾರತ ಹೇಳುವ ಬದಲು ಮರಕ್ಕೋ, ಗೋಡೆಗೋ ಹೇಳಿದ್ದರೆ ಸಾರ್ಥಕವಾಗುತ್ತಿತ್ತು ಎಂದ.

''ನೀವು ಹೇಗಿದ್ದೀರಿ?" ಎಂದು ಒಬ್ಬ ತಲೆತಿರುಕ ಕೇಳಿದ

"ನನಗೆ ರೋಗವಿಲ್ಲ, ರುಜಿನ ಇಲ್ಲ, ಸುಖವಾಗಿದೀನಿ...." ಎನ್ನುತ್ತಾ ಪುಟ್ಟಪ್ಪ ಗುಡಿಯ ಛಾವಣಿ ಹಾರುವ ಹಾಗೆ "ಅಯ್ಯೋ" ಎಂದು ಕೂಗಿ ನೆಲಕ್ಕೆ ಬಿದ್ದುಬಿಟ್ಟ.

ನಾವು ಹಣತೆ ಬೆಳಕಿನಲ್ಲಿ ನೋಡಿದರೆ ಆತನಿಗೆ ಚೇಳು ಕಡಿದಿತ್ತು. ಯಾರನ್ನೋ ಕರೆದು, ಮಂತ್ರಿಸಿದ ಭಸ್ಮ ಹಚ್ಚಿದೆವು ಅರ್ಧ ಗಂಟೆಗೆ ಆತ ಸರಿಹೋಗಿ ಭಾರತ ವಾಚನಕ್ಕೆ ಆರಂಭ ಮಾಡಿದ. ಆ ದಿನ ಭಾರತ ಮುಗಿದ ಮೇಲೆ ಸೂರಪ್ಪ

"ಶ್ರದ್ಧೆಯಿಂದ ಭಾರತ ಹೇಳಿದರೆ ಕೇಳಿದರೆ ಏನಾಗುತ್ತದೆ"? ಎಂದು ಕೇಳಿದ.

"ಅದು ಅಳತೆಗೆ ಸಿಗುವುದಿಲ್ಲ. ಅದು ಸಂಸ್ಕಾರಕ್ಕೆ ಸೇರಿದ್ದು" ಎಂದು ಯಾರೋ ಹಿರಿಯರು ಹೇಳಿದರು.

"ಶ್ರದ್ಧೆಯಿಂದ ಓದಿದರೆ ಚೇಳು ಕಡಿಯುತ್ತದೆ" ಎಂದು ಯಾವನೋ ಕೂಗಿಕೊಂಡ.



---

ಆರತಿ : ಒಂದು ಕಾಲದಲ್ಲಿ ನನಗೂ ಒಂದು ಧ್ಯೇಯ ಇತ್ತು

ಭಾರತಿ : ಈಗ ಏನಾಯಿತು ಅದಕ್ಕೆ?

ಆರತಿ : ನನ್ನೇ ಮದುವೆ ಮಾಡ್ಕೊಂಡು ಹಿಂದೆ ಮುಂದೆ
ಓಡಾಡ್ಕೊಂಡು ಸುಖವಾಗಿದೆ ಕಣೆ.

---

# ಮನೆ ಹುಡುಕಿ ನೋಡು

—ಎಚ್. ಎಲ್. ಕೇಶವಮೂರ್ತಿ

---

ಮೂರ್ಖ ಮನೆ ಕಟ್ಟುಸ್ತಾನೆ, ಬುದ್ಧಿವಂತ ಅದರಲ್ಲಿ ವಾಸಿಸ್ತಾನೆ ಅನ್ನೋ ಮಾತಲ್ಲಿ ನಂಬಿಕೆ ಇದ್ದ ನನ್ನ ಹುಟ್ಟಿಸಿದ ದೇವರು ಮೇವು ತೋರಿಸಿದ್ದು ಸರ್ಕಾರಿ ಮೈದಾನದಲ್ಲಿ. ಬೇರೆಯಂವರ ಮರ್ಜಿಗೆ ಅನುಗುಣವಾಗಿ ಊರಿಂದೂರಿಗೆ ನನ್ನ ಎತ್ತಂಗಡಿ ಆಗ್ತಾನೆ ಇರ್ತಿತ್ತು.

ಮನೆ ಹುಡುಕೋದು ನನಗೆ ಯಾವತ್ತೂ ಸಮಸ್ಯೆ ಆಗಿರ್ಲಿಲ್ಲ. ಯಾಕೇಂದ್ರೆ ನಾನು ಯಾರ ಜಾಗಕ್ಕೆ ವರ್ಗ ಆಗಿ ಹೋಗ್ತಿದ್ನೋ, ಅವರ ಮನೇನೂ ನನಗೆ ವರ್ಗ ಆಗ್ತಿತ್ತು. ಆದ್ರೆ ಈ ಸಲ ಎಡವಟ್ಟಾಯ್ತು. ನಾನು ರಿಲೀವ್ ಮಾಡಿದ ಆಸಾಮಿ ಪ್ರಳಯಾಂತಕ. ಜೇನು ಬಿಚ್ಚೋರು ಕೈ ನೆಕ್ಕೋದು ಸಹಜ. ನೆಕ್ಕೋದು ಹೆಂಗಿದ್ರೂ ನೆಕ್ತೀವಿ, ಸ್ವಲ್ಪ ಹೆಚ್ಚಿಗೇನೇ ನೆಕ್ಕೋಣ ಅನ್ನೋ ಒಳಾಸೆ ಎಲ್ರಿಗೂ ಇರ್ತದೆ. ಆದಕ್ಕೇ ಫಲವತ್ತಾದ ಜಾಗಗಳಿಗೆ ಪರದಾಡ್ತಾರೆ. ಆದ್ರೆ ಈ ಇಸಂ ಅಂತೋನಲ್ಲ. ಫಲವತ್ತಾದ ಜಾಗವೇ ಆಗಬೇಕು ಅಂತಿಲ್ಲ. ಜಾಗ ಎಂತಹದ್ದಾದ್ರೂ ಆಗಿರ್ಲಿ, ಅದನ್ನ ಫಲವತ್ತಾಗಿ ಪರಿವರ್ತಿಸುವ ಪ್ರಚಂಡ. ಸ್ವಂತ ಮನೆ ಮಾಡಿದ್ದ. ಎಲ್ಲಿಗೆ ವರ್ಗ ಆದ್ರೂ, ಮನೆ ಬದಲಾಯಿಸುತ್ತಿರಲಿಲ್ಲ. ಟೂರಿಂಗ್ ಟಾಕೀಸ್ ತರ ತಾನು ಮಾತ್ರ ಸಂತ್ತಾನೆ. ಹೆಡ್ ಆಫೀಸ್ ಅಡ್ರೆಸ್ ಮಾತ್ರ ಆದೇ. ಹಿಂಗಾಗಿ ನಾನು ಬಾಡಿಗೆ ಮನೆ ಹುಡುಕೋದು ಅನಿವಾರ್ಯ ಆಯ್ತು.

ನಾನು ಹೇಳಿ ಕೇಳಿ ಮಧ್ಯಮ ವರ್ಗದ ಆಸಾಮಿ. ಈ ವರ್ಗದ ಜನರ ಆಸೆಗಳು ಬೇಡಿಕೆಗಳು ವಿಚಿತ್ರ. ತಮಗೆ ಮೀರಿದ್ದನ್ನ ಆಶಿಸೋದೆ ಈ ವರ್ಗದ ಜನರ ಜಾಯಮಾನ. ನನಗೂ ಮನೆ ಅಂದಾಗ :

"ದೂರ ಬೆಟ್ಟದಲ್ಲಿ ಪುಟ್ಟ ಮನೆ ಇರಬೇಕು
ಮನೆಯು ತುಂಬ ಹೂವ ರಾಶಿ ಹಾಕಿರಬೇಕು"

ಅಂತ ಆಸೆ ಇದ್ದರೂ, ಅನುಭವ :

"ಹತ್ತಿರದ ಗಲ್ಲಿಯ ಮುರುಕು ಮನೆ ನಾಕು
ಗೋಣು ಗದ್ದಲಗಳ ನಡುವೆ ನಗು ತುಂಬಿರಬೇಕು"

ಅನ್ನುವುದನ್ನ ಕಲಿಸಿತ್ತು.

ನಾನು ಭಯಂಕರ Practical ಮನುಷ್ಯ. ಮನೆ ಅನ್ನೋದಕ್ಕೆ ಅನರ್ಥ ಕೋಶದ ಅರ್ಥ : ಸಣ್ಣವರು ದೊಡ್ಡವರೆಂದೆನಿಸಿಕೊಳ್ಳುವ, ದೊಡ್ಡವರು ಸಣ್ಣವರೆಂದೆನಿಸಿಕೊಳ್ಳುವ ಜಾಗ; ಇಲಿ, ಜಿರಲೆ, ಹೆಗ್ಗಣ, ಇರುವೆ, ನೊಣ, ಹಲ್ಲಿ ಇವುಗಳ ನಡುವೆ ನರ ಮನುಷ್ಯ ವಾಸ ಮಾಡುವ ಜಾಗ. ಹುಟ್ಟಿದಾರಭ್ಯ ಬಾಡಿಗೆ ಮನೇಲಿ ಇರೋದ್ರಿಂದ ನನ್ನ ಅನುಭವ ಇದಕ್ಕಿಂತಲೂ ಹಿರಿದು. ಈ ಅನುಭವದ ಹಿನ್ನೆಲೆಯಲ್ಲಿ ನಾನು ಮನೆ ಹುಡುಕಲು ಪ್ರಾರಂಭಿಸಿದ್ದು.

ಕಛೇರಿಗೆ ಹತ್ತಿರದ ಬಡಾವಣೆಯಲ್ಲಿ ನನಗೆಟಕುವ ಐದಾರು ಮನೆಗಳು ಖಾಲಿ ಇವೆ ಅಂತ ತಿಳೀತು. ಹುಡುಕಿಕೊಂಡು ಹೊರಟೆ. ಮನೆ ಬಾಡಿಗೆಗೆ ಇದೆ ಅನ್ನೊ ಬೋರ್ಡು ಎಲ್ಲೂ ಕಾಣಲಿಲ್ಲ ಯಾರನ್ನಾದರೂ ವಿಚಾರಿಸಬೇಕಾಗಿತ್ತು. ಮನೆಯ ವರಾಂಡದಲ್ಲಿ ಪೇಪರ್ ಓದ್ತಾ ಕುಳಿತಿದ್ದ ಹಿರಿಯರೊಬ್ಬರು ಕಣ್ಣಿಗೆ ಬಿದ್ರು.

"ಸಾರ್?"
ಪೇಪರ್ರಿಂದ ಕಣ್ಣೆತ್ತಿ ಪ್ರಶ್ನಾರ್ಥಕ ನೋಟ ಬೀರಿದ್ರು.
"ಇಲ್ಲಿ ಮನೆ ಇದ್ಯ?"
"ಇದೆ, ಯಾಕೆ ? ನಿಮಗೆ ಕಣ್ಣು ಮಂದ ಏನು ? ಇವೆಲ್ಲ ಮನೆ ತರಹ ಕಾಣಿಸಲ್ವೆ ?
"ಹಾಗಲ್ಲ ಸಾರ್, ಬಾಡಿಗೆ ಮನೆ ನಾನು ಕೇಳಿದ್ದು".
"ಅವೂ ಇದಾವೆ."
"ಎಲ್ಲಿ ಸಾರ್?"
"ಅದು, ಬಾಡಿಗೆ ಮನೇನೆ."
"ನೋಡ್ಲ ಸಾರ್?"
"ನೋಡಿ."
ನೋಡಿದೆ. ಯಾರೋ ವಾಸ ಇದ್ದಂತಿತ್ತು.
"ಸಾರ್, ಯಾರೋ ಇರೋ ಹಾಗಿದೆ ?
"'ಹೌದು, ಇದಾರೆ.''
ಸಾರ್, ಮತ್ತೆ ಬಾಡಿಗೆ ಮನೆ ಇದೆ ಅಂದ್ರಿ ?"

"ಹೌದು. ನೀವು ಕೇಳಿದ್ದು ಏನಂತ? ಬಾಡಿಗೆ ಮನೆ ಇದೆಯೆ ಅಂತ. ಅದು ಬಾಡಿಗೆ ಮನೇನೆ. ಆದ್ರೆ ಖಾಲಿ ಇಲ್ಲ, ಅಷ್ಟೆ. ನಿಮಗೆ ಬಾಡಿಗೆಗೆ ಮನೆ ಬೇಕಾಗಿತ್ತ?"

""ಹೌದು, ಸಾರ್"

"ಪ್ರಶ್ನೆ ಸರಿಯಾಗಿ ಹಾಕ್ಬೇಕು. ನೀವು ಕೇಳಬೇಕಾಗಿದ್ದು ಬಾಡಿಗೆ ಮನೆ ಖಾಲಿ ಇದೆಯೆ ಅಂತ ಅಲ್ವೆ?"

"ಹೌದು ಸಾರ್, ಇದ್ಯೆ ಸಾರ್?"

"ಯಾವುದೂ ಖಾಲಿ ಇಲ್ಲ.''

ಈ ಹಾಳಾದ ಮುದುಕ ಸರ್ಕಾರಿ ಕೆಲಸದಿಂದ ರಿಟೈರ್ ಆದ ಆಸಾಮಿ ಇರ ಬೇಕು. ಈಗ ಬರಿ ಹಳೆ ಟೈರು. ಹೊತ್ತು ಕಳೆಯೋಕೆ ನನ್ನಂತಹ ಬಕರಾನ್ನ ಬಕ ಪಕ್ಷಿ ತರಹ ಬಯಸ್ತಿದ್ದ ಅಂತ ಕಾಣಿಸುತ್ತೆ. ಸಮಯ ಎಲ್ಲ ಹಾಳು ಮಾಡಿದ್ದ. ತಪ್ಪಿಸಿಕೊಂಡು ಹೊರಟೆ.

ಸ್ವಲ್ಪ ದೂರಾನೂ ಹೋಗಿರಲಿಲ್ಲ. ಇನ್ನೊಬ್ಬರು ಹಿರಿಯರು ಎದುರಾದ್ರು. ಅವರನ್ನು ತಡೆದು ಕೇಳ್ದೆ. ''ಸಾರ್, ಇಲ್ಲಿ ಯಾವುದಾದರೂ ಬಾಡಿಗೆ ಮನ ಖಾಲಿ ಇದೆಯೆ ?''

ನನ್ನ ಪ್ರಶ್ನೆ ಕೇಳಿ ಮೇಲಿಂದ ಕೆಳಕ್ಕೆ ನಾನೊಂದು ವಿಚಿತ್ರ ಪ್ರಾಣಿ ಅನ್ನೋ ತರಹ ನೋಡಿ, "ಯಾವೂರ್ರಿ ನಿಮ್ದು ?" ಅಂದ್ರು.

'"ಯಾಕ್ಸಾರ್ ?"

''ಬಂದ್ಧಿ ಇದೆಯೇನ್ರಿ ನಿಮ್ಗೆ? ಬಾಡಿಗೆಗೆ ಮನೆ ಖಾಲಿ ಇದೆಯೆ ಅಂತ ಇಷ್ಟುದ್ದ ಕೇಳ್ತೀರಲ್ಲ, ವಾಸವಾಗಿರೋ ಮನೇನ ಬಾಡಿಗೆಗೆ ಕೇಳಿಕೊಂಡು ಯಾರಾದ್ರೂ ಬರ್ತಾರೇನ್ರಿ? ಮನೆ ಇದೆಯೋ ಅಂತ ಕೇಳಿದ್ರೆ ಆಗಲ್ವೆ?"

ಆ ಮುದುಕ ಲಾಂಗ್ ಹ್ಯಾಂಡು, ಇವ್ನು ಷಾರ್ಟ್ ಹ್ಯಾಂಡು.

"ಸರಿ ಸಾರ್, ಇದಿಯೋ?"

"ಇಲ್ಲ"

ಅಂತ ಹೇಳಿ ಸರಸರನೆ ಹೋಯ್ತು ಪ್ರಾಣಿ.

ನನ್ನ ಈ ಅವಸ್ಥೇನ ವಾರೆಗಣ್ಣಿನಲ್ಲಿ ನೋಡ್ತ ಮನೆ ಬಾಗಿಲಲ್ಲಿ ನಿಂತಿದ್ದ ಇನ್ನೊಬ್ಬ ಹೊರಕ್ಕೆಬಂದು, "ಆ ಹಾಳಾದವನ ಜಾಯಮಾನವೆ ಹಾಗೆ. ಹೀನಸುಳಿ ಬೋಳಿಸಿದ್ರೆ ಹೋಗುತ್ಯೆ? ಇಲಾಖೆಯಲ್ಲಿದ್ದಾಗ್ಲೂ ಹೀಗೇ ಆಡ್ತಿದ್ದ. ನಿಮಗೀಗ ಏನು ಬೇಕು? ಮನೆ ತಾನೆ?"

"ಹೌದು, ಸಾರ್. ಇಲ್ಲಿ ಯಾವುದಾದರೂ ಖಾಲಿ ಇವೆ?"

"ಯಾವ್ದೂ ಇದ್ದ ಹಾಗಿಲ್ಲಾ........"

ಮತ್ತೆ ಇವನ ಹತ್ತಿರ ನನಗೇನು ಕೆಲಸ? ಹೊರಟೆ.

"ರೀ ಇವ್ರೆ, ನಿಲ್ಲಿ. ನಿಮ್ಮ ಹೆಸ್ರು?"

ಹಾಳಾದ ಸಹವಾಸ, ಹೇಳ್ದೆ.

"ಕೆಲ್ಸ?"

ಮನೆ ಹುಡುಕೊ ತರಾತುರಿಯಲ್ಲಿ ಸುವಾಗ ಇವನದ್ದು ಬೇರೆ ಗೋಳು, ಅದೂ ಆಯ್ತು.

"ವಿಳಾಸ?"

ಇವನೇನು ನನ್ನ ಸಂಬಂಧ ಬೆಳೆಸಬೇಕಾ? ಒದೀಬೇಕೋ, ಬೇಡ್ವೋ ಹೇಳಿ, ಬಂದ ಸಿಟ್ನ್ನ ಅದುಮಿಟ್ಟು ಕೇಳ್ದೆ :

"ಹಂಗಂದ್ರೇನು?"

"ಅದೇ ನೀವು ಹುಟ್ಟಿ, ಬೆಳೆದು, ವಾಸಿಸೊ ಜಾಗ".

"ನಾನುಟ್ಟಿದ್ದು ಮಂಡ್ಯದಲ್ಲಿ, ಬೆಳೆದದ್ದು ಮೈಸೂರ್ನಲ್ಲಿ. ಈಗ ಪರದಾಡ್ತಿ ರೋದು ಬೆಂಗಳೂರಲ್ಲಿ. ನಿಮಗೆ ಯಾವ್ದು ಬೇಕು?"

"ಓ, ಹಾಗಾ? ತಿಳಂಸ್ಕೀನಿ, ತಿಳಂಸ್ಕೀನಿ. ಈಗ ನೀವು ಇಲ್ಲೆ, ಈ ಕ್ಷಣ ಇದ್ದಕ್ಕಿದ್ದಂತೆ ನೆಗದು ಬಿದ್ರಿ ಅಂತ ಇಟ್ಕಳ್ಳಿ. ನಿಮ್ಮ ಹೆಣ ಎಲ್ಲಿಗೆ ಕಳುಹಿಸಬೇಕು?"

"ಸ್ಮಶಾನಕ್ಕೆ"

ಅಂತ ಹೇಳಿ ಬೀಸುಗಾಲು ಹಾಕಿದೆ.

ಹಾಳಾದ್ದು ನಾನು ಹೊರಟ ಗಳಿಗೆಯೇ ಸರಿ ಇರಲಿಲ್ಲವೇನೋ. ಸಿಕ್ಕಿದೋರೆಲ್ಲ ಆಷ್ಟಗಾಲಿಸೆಯೋರೆ. ಇದೆಲ್ಲೋ ವಿದ್ಯಾವಂತ ಮಧ್ಯಮ ವರ್ಗದ ಬಡಾವಣೆ ಇರಬೇಕು. ಗಂಡ, ಹೆಂಡತಿ ಇಬ್ಬರೂ ದುಡಿಯೋಕೆ ಹೋಗ್ತಾರೆ ಮನೆ ಕಾವಲಿಗೆ ಈ ಅತಿ ಬುದ್ಧಿ ವಂದುಂಕರು. ಹೊತ್ತಿಗ ಮುಂಚೆ ಬಂದ್ರೆ ನನ್ನ ಕೆಲಸ ಕೈಗೂಡ ಬಹುದು ಅಂತ ಅವತ್ತಿಗೆ ವಿರಾಮ ಹಾಕ್ದೆ.

ಮಾರನೆ ಬೆಳಿಗ್ಗೆ ಮತ್ತೆ ಮನೆ ಬೇಟೆ.

ಬೀದಿ ತುಂಬ ತೊಳಿಯೋ ಬಳಿಯೋ, ರಂಗೋಲಿ ಇಡೋ, ನಲ್ಲಿ ನೀರಿಗೆ ನಿಂತಿರೋ ಹೆಂಗಸರು. ಆ ಕಡೆ ಈ ಕಡೆ ನೋಡ್ತ ಹೋದ್ರೆ ಹೆಂಗಸರನ ನೋಡೋಕೆ ಹಿಂಗ್ತಿರುಗ್ತಿದಾನೆ, ಎಲ್ಲೋ ಬೀದಿ ಕಾಮಣ್ಣ ಇರಬೇಕು ಅಂದು ಕೊಳ್ತಾರೇನೋ ಅನ್ನೋ ಅಳುಕು. ಮರ್ಯಾದಸ್ಥನ ತರಹ ತಲೆ ಬಗ್ಗಿಸಿಕೊಂಡು ಹೋಗೋಣ ಅಂದ್ರೆ, ಮನೆ ಕಣ್ಣಿಗೆ ಬೀಳಲ್ವಲ್ಲ ಅನ್ನೊ ಪೀಕಲಾಟ. **To see or not to see** ಅನ್ನೋ ತೊಳಲಾಟದಲ್ಲಿದ್ದವನಿಗೆ ಹಿಂದೆಂದೋ ಓದಿದ್ದ ಮನಶ್ಶಾಸ್ತ್ರ ಸಹಾಯಕ್ಕೆ ಬಂತು. ಮನೆ ಒಡೆಯರ ವಿಶ್ವಾಸ ಗಳಿಸಿಕೊಳ್ಳಬೇಕಾದ್ರೆ ಅವರ ಮಕ್ಕಳನ್ನ ಮುದ್ದು ಮಾಡಬೇಕಂತೆ. ಕಣ್ಣಿಗೆ ಬಿದ್ದ ಒಬ್ಬ ಪೋರನ್ನ ಹಿಡ್ಕಂಡೆ. ಹೆಸರು, ವಿದ್ಯೆ ಕೇಳ್ತಾ ವಿಶ್ವಾಸ ಗಳಿಸಿಕೊಂಡೆ.

ಹೆಚ್ಚಿಗೆ ಮಾತಿಗೆ ನಿಂತ್ರೆ ತೊಂದರೆ ಖಚಿತ. ಯಾಕೇಂದ್ರೆ ನಾನೋ ಆ ಬೀದಿಗೆ ಅಪರಿಚಿತ. ಚಿಕ್ಕ ಹುಡುಗನ ಜೊತೆ ಮಾತಾಡ್ತಿದೀನಿ. ಬೀದಿ ಹೆಂಗಸರೆಲ್ಲ ಇವ್ನು ಮಕ್ಕಳ ಕಳ್ಳ ಅಂತ ಗುಸುಗುಸು ಆರಂಭಿಸಿದ್ರೆ? ನನ್ನ ಹುಶಾರಿ ನನ್ನ ಕೈಲಿರ ಬೇಕು. ಇಲ್ಲಿಂದ ಬೇಗ ಜಾರಿಕೊಳ್ಳಬೇಕು ಅಂತ "ಮನೇಲಿ ದೊಡ್ಡೋರು

ಇದ್ದಾರಾ ಮರಿ?" ಅಂದೆ. "ಇದ್ದಾರೆ ಬನ್ನಿ, ಅಂಕಲ್" ಅಂತು ಆ ಪೋರ.

"ಮಮ್ಮಿ, ಮಮ್ಮಿ ಯಾರೋ ಬಂದಿದಾರೆ" ಅಂತ ಒಳಕ್ಕೆ ಓಡ್ದ.

ಮಮ್ಮಿ ಪ್ರತ್ಯಕ್ಷ ಆದ್ರು. ಮೇಲಿಂದ ಕೆಳಗೆ ನೋಡಿದ್ರು.

"ಯಾರಯ್ಯ ನೀನು?"

"ನೋಡಿ ಅಮ್ಮ."

"ನಿನ್ನಮ್ಮನೇನಯ್ಯ ನಾನು?"

"ಅಲ್ಲ ತಾಯಿ."

"ನಿನ್ ಕಣ್ಗೆ ನಾನು ತಾಯಿ ತರ ಕಾಣ್ತೀನ?"

"ಹಾಗಲ್ಲ ಮೇಡಂ."

"ಮೇಡಂ ಕೆಲ್ಸ ಮಾಡೋಕೆ ನನ್ನನ್ನೇನು ಭಿಕಾರಿ ಅಂತ ತಿಳ್ಕಂಡೇನಯ್ಯ? "

"ಅಲ್ಲ ನೋಡಿ, ಒಂದು ಮನೆ ಬೇಕಾಗಿತ್ತು....."

"ಅದ್ಕೆ ಇಲ್ಯಾಕೆ ಬಂದೆ? ಇಲ್ಲೈತೆ ಅಂತ ಯಾವೋನೇಳ್ದೋನು?"

"ಯಾರೂ ಹೇಳ್ಲಿಲ್ಲ, ವಿಚಾರಿಸೋಣ ಅಂತ ಬಂದೆ."

"ವಿಚಾರಿಸೋಕೆ ಮನೇಲಿ ಗಂಡುಸ್ರಿಲ್ಲದ ಹೊತ್ತೇ ಆಗ್ಬೇಕೇನಯ್ಯ? ನಿನ್ನಂತೋರ ಸಾವ್ರ ನೋಡಿದೀನಿ. ಮನೆ ಬೇಕಂತೆ, ಮನೆ. ನಡಿ ನಡಿ, ಆಚೆಗೆ ನಡಿ."

ಹಚಾಹಚಾ ಅಂತ ನಾಯಿ ಹೊರಕ್ಕೆ ಹಾಕಿದಂತೆ ಹಾಕಿದ್ಳು ಮಾರಾಯ್ತಿ. ಬೆಳಿಗ್ಗೆ ಬೆಳಿಗ್ಗೇನೆ ಈ ಗಟಾಣಿ ಹೆಂಗಸಿನ ಸಹವಾಸ, ಆ ಬೀದಿ ಹೆಂಗಸರ ತಿರಸ್ಕಾರ ನೋಟ ತಪ್ಪಿಸಿಕೊಂಡು ಬರೋ ಅಷ್ಟರಲ್ಲಿ ಸಾಕು ಬೇಕಾಗೋಯ್ತು.

ಮುಂದೆ ಹುಶಾರಾದೆ. ಮನೇಲಿ ಗಂಡಸರಿದ್ದಾರೆ ಅಂತ ಖಾತರಿಪಡಿಸಿ ಕೊಂಡೇ ಕಾಲಿಟ್ಟೆ. ಮನೆಯಾತ ಸಂಭಾವಿತ, ಮನೆಯೊಡತಿಯೂ ಅಷ್ಟೆ. ನಗ್ ನಗ್ತಾ ಮನೆ ತೋರ್ಸಿದ್ರು. "ನಿಮ್ಗೆ ಒಪ್ಪಿಗೆಯಾಯ್ತೆ?" ಅಂತ ಪ್ರೀತಿಯಿಂದ ಕೇಳಿದ್ರು. ಒಪ್ಪಿಗೆಯಾಗದೇ ಇದ್ರೂ ಇಂತಹ ನೆರೆಹೊರೆಗಾಗಿಯಾದರೂ ಒಪ್ಪಿಕೋ

ಬೇಕು ಅನ್ನೋ ನಡವಳಿಕೆ. ಮುಂಗಡ ತೆಗೆದುಕೊಳ್ಳುವುದಕ್ಕೆ ಮುಂಚೆ ಯಜಮಾನ್ರು ಕೇಳಿದ್ರು:

''ತಪ್ಪು ತಿಳ್ಕೋ ಬೇಡಿ, ನಿಮ್ಮ ಹೆಸರೇನು ಅಂದ್ರು?"
ಹೇಳ್ದೆ.

"ಹೌದಾ? ನಿಮ್ಮ ಕೆಲ್ಸ ಖಾಯಂಮ್ಮೊ? ತಾತ್ಕಾಲಿಕವೊ?"
ತಿಳುಸ್ದೆ.

"ಹೀಗೆ ಕೇಳಿದೆ ಅಂತ-ತಪ್ಪು ತಿಳ್ಕೋಬೇಡಿ. ನಾವು ಮಕ್ಕಳೊಂದಿಗರು. ಈ ಬಾಡಿಗೇಲೆ ನಮ್ ಸಂಸಾರ ತೂಗಬೇಕು. ಖಾಯಂಮ್ಮ ಅಂದ್ಮೇಲೆ ಯೋಚನೆ ಇಲ್ಲ ಬಿಡಿ. ಬಾಡಿಗೆ ಸಲೀಸಾಗಿ ಬಂದುಬಿಡುಂತ್ತೆ. ನಿಮ್ಮನ್ನ ನೋಡಿದ್ರೆ ಇನ್ನೂ ಚಿಕ್ಕ ವಯಸ್ಸು. ಮದುವೆ ಗಿದುವೆ ಆಗಿದೆ ತಾನೆ? ಹೀಗೆ ಕೇಳ್ತಿದೀನಿ ಅಂತ ತಪ್ಪು ತಿಳ್ಕೊಬೇಡಿ. ನಮಗೆ ಮನೇಲಿ ಬೆಳೆದ ಹೆಣ್ಣು ಮಕ್ಕಳಿದ್ದಾರೆ. ಬಂದೋಗಿ ಬಂದಾಗ ಬಾರವಲ್ಲ ಅಂತ ಅಷ್ಟೆ."

ಕೆಡಿಸೋ ಚಾಳಿ ಇದ್ರೆ ಹೆಂಗಿದ್ರೂ ಕೆಡುಸ್ತಾನೆ. ಬ್ರಹ್ಮಚಾರಿಗಳೆಲ್ಲ ಪೋಲಿಗಳು, ವಿವಾಹಿತರೆಲ್ಲ ಸಂಭಾವಿತರೆ?

ಅನುಮಾನ ಪರಿಹರಿಸಿದೆ.

"ನಿಮ್ಮ ಮನೇಲಿ ಏನೇನಿದೆ ಅಂತ ಕೇಳೋದು ಸಭ್ಯತೆ ಅಲ್ಲ. ಆದ್ರೂ ನೋಡಿ, ಏನೂ ತಪ್ಪು ತಿಳ್ಕೊಬೇಡಿ. ಟೀವಿ ಗೀವಿ ಇಲ್ಲ ಅಂದ್ರೆ ನಿಮ್ಮ ಮನೆಯೋರೆಲ್ಲ ಇಲ್ಲಿಗೇ ಬಂದು ಬಿಡ್ತಾರೆ. ಪಾಪ ಅವರಿಗೂ ಆಸೆ ಇರುತ್ತೆ ನೋಡಿ. ಬೇಡಿ ಅನ್ನೋಕಾಗಲ್ಲ. ನಮಗೂ ತೊಂದರೆ. ನಿಮ್ಹತ್ರ ಟೀವಿ ಇರಬೇಕಲ್ಲ?"

ಉತ್ತರ ಕೇಳಿ ಸಮಾಧಾನಪಟ್ಟುಕೊಂಡ್ರು.

"ನನಗೆ ಈ ಜಾತಿ ಗೀತೀಲಿ ನಂಬಿಕೆ ಇಲ್ಲ. ಆದ್ರೂ ನೋಡಿ ಮನುಷ್ಯ ಸಂಘ ಜೀವಿ. ಸಮಾಜದ ಕಟ್ಟುಕಟ್ಟಳೆಗಳನ್ನ ಬಿಡೋದು ಕಷ್ಟ. ಯಾರಾದರೂ ನಿಮ್ಮ ಮನೇಲಿ ಬಾಡಿಗೆಗಿರೋರು ಯಾವ ಜಾತಿ ಅಂತ ಕೇಳಿದ್ರೆ ಹೇಳಬೇಕಾಗುತ್ತೆ ನೋಡಿ, ಅದಕ್ಕೋಸ್ಕರ ಕೇಳ್ತಿದೀನಿ ಅಷ್ಟೆ. ತಪ್ಪು ತಿಳ್ಕೊಬೇಡಿ. ನಿಮ್ಮ ಜಾತಿ ಯಾವ್ದು?"

ಹೇಳ್ದೆ.

"ಒಳ್ಳೇದು, ಒಳ್ಳೇದು. ಅಡ್ವಾನ್ಸು ನಿಮ್ಮತ್ರಾನೆ ಇರ್ಲಿ. ನೆನ್ನೆ ಒಬ್ರು ಮನೆ ನೋಡ್ಕಂಡೋಗಿದಾರೆ. ಯಾವುದಕ್ಕೂ ಒಂದೆರಡು ದಿವ್ಸದಲ್ಲಿ ಬಂದು ಹೇಳ್ತೀನಿ ಅಂದಿದಾರೆ. ಅವ್ರು ಬೇಡ ಅಂದ್ರೆ, ಖಂಡಿತ ನಿಮಗೆ ಕೊಡ್ತೀನಿ. ಹೀಗಂದೇಂತ ತಪ್ಪು ತಿಳ್ಕೋಬೇಡಿ."

ತಿಳಿದುಕೊಳ್ಳುವುದಕ್ಕೇನೂ ಇರಲಿಲ್ಲ. ಎಲ್ಲ ಸ್ಪಷ್ಟ ಆಗಿತ್ತು.

ಮನೆ ಕಟ್ಟಿ ನೋಡು, ಮದುವೆ ಮಾಡಿ ನೋಡು ಅನ್ನೋ ಗಾದೆ ಇದೆ. ಇದಕ್ಕೆ ಇನ್ನೂ ಒಂದನ್ನ ಸೇರಿಸಬೇಕು: ಬಾಡಿಗೆ ಮನೆ ಹುಡುಕಿ ನೋಡು. ಆಗ ಆಗುವ ಅನುಭವ ಎಂತೆಂತಹದ್ದು?

ಈ ಬಾಡಿಗೆ ಮನೆ ಒಡೆಯರ ಆಲೋಚನೆಗಳೇ ವಿಚಿತ್ರ.

ಕೆಲವರಿಗೆ ವಿವಾಹಿತರು ಬೇಕು: ಉಳಿದವರಿಗೆ ಅವಿವಾಹಿತರು ಬೇಕು.

ಅವಿವಾಹಿತರೇನೋ ಮನಸ್ಸು ಮಾಡಿದರೆ 'ಅ' ತೆಗೆದು 'ಹಾಕಬಹುದು. ವಿವಾಹಿತರೇನು ತೆಗೀಬೇಕು? ಮನೆ ಸಿಗಲಿ ಅಂತ ಹೆಂಡತಿ ತಲೇನ?

ಒಬ್ಬ ಮಕ್ಕಳೇ ಇರಬಾರ್ದು ಅಂದ್ರೆ ಇನ್ನೊಬ್ಬನ ಆರ್ಡರ್ರು—ಮಕ್ಕಳಿರಲೇ ಬೇಕು.

ಈ ಮಕ್ಕಳೇನು ಬೇಕು ಅಂದಾಗ ಕೊಂಡುಕೊಂಡು ಬರೋಕೆ, ಬೇಡ ಅಂದಾಗ ಮಾರಾಕೋಕ್ಕೆ ಮಾರ್ಕೆಟ್ಟಿನಲ್ಲಿ ಸಿಗೋ ಸರಕೆ?

ಮನೆ ಒಡತಿಗೆ ಬಾಡಿಗೆದಾರನ ಹೆಂಡತಿ ಕುರೂಪಿ ಆಗಿರಬೇಕು; ಅದೇ ಒಡೆಯನಿಗೆ ಬಾಡಿಗೆದಾರನ ಹೆಂಡತಿ ಸುರಸುಂದರಿಯಾಗಿರಬೇಕು.

ಬಾಡಿಗೆ ಮನೆ ಹುಡುಕುವಾಗ 'ಭಾರ್ಯಾ ರೂಪವತಿ ಶತ್ರು' ಮಾತ್ರ ಅಲ್ಲ; 'ಭಾರ್ಯಾ ಕುರೂಪವತಿಯೂ ಶತ್ರು'ವೇ.

ಹಂಗೆ ಜಾತಿ, ಅಭ್ಯಾಸ, ಹವ್ಯಾಸ ಎಲ್ಲ ಒಬ್ಬೊಬ್ಬರಿಗೆ ಒಂದೊಂದು ತರಹ ಇರಬೇಕು. ಇದು ಅಸಾಧ್ಯ ಅಂತ ಗೊತ್ತಿದ್ದೂ ಆ ಮೂರ್ಖರು ಹಂಗೆ ನಡೆದ

ಕೊಳ್ತಾರೆ. ಆದ್ರೇ ನೋಡಿ. ಮನೆ ಒಡೆಯರು ಜಾವೆ ಕೆಳಗೆ ನುಸುಳಿದರೆ, ಬಾಡಿಗೆದಾರರಾದ ನಾವು ರಂಗೋಲಿ ಕೆಳಗೆ ನುಸುಳಬೇಕು.

ಅವತ್ತು ಮನೆ ಹಿಡಿಯಲೇಬೇಕು ಅಂತ ನಿರ್ಧರಿಸಿದೆ. ಖಾಲಿ ಇದ್ದ ಬಾಡಿಗೆ ಮನೆ ಯಜಮಾನನನ್ನ ಹಿಡ್ದೆ. ಯಥಾಪ್ರಕಾರ ಶುರು ಆಯ್ತು.

‘‘ಹೆಸರು”?

ಹೇಳ್ದೆ.

‘‘ಕೆಲಸ”?

ತಿಳಿಸಿದೆ.

‘‘ಜಾತಿ”?

ಅವನಿಗೆ ಬೇಕಾದ್ದೆ

‘‘ಅಭ್ಯಾಸ, ಹವ್ಯಾಸ?’’

ಕೇಳಿ ಯಜಮಾನ ತೃಪ್ತಿ ಆದ. ಮನೆ ಬೀಗದ ಕೈ ಕೊಟ್ಟ.

ಪರಮಾಶ್ಚರ್ಯ. ಮನೆಯೊಡೆಯ ಬಯಸಿದ ಸರ್ವ ಗುಣಗಳೂ ನನ್ನಲ್ಲಿ ಮೂರ್ತೀಭವಿಸಿದ್ದು ಹೇಗೆ?

ಬಹಳ ಸುಲಭ. ಮೊದಲೇ ಆತನ ಹತ್ತಿರ ಒಬ್ಬನ್ನ ಕಳಿಸಿದ್ದೆ. ಆತ ತನಗೆ ಬಾಡಿಗೆ ಮನೆ ಬೇಕು ಅನ್ನೋ ನೆಪದಲ್ಲಿ ಯಜಮಾನನ ‘ಬೇಕು’ಗಳನ್ನೆಲ್ಲ ತಿಳಿದು ಬಂದಿದ್ದ!

ನೂರು ಸುಳ್ಳು ಹೇಳಿ, ಒಂದು ಮದುವೆ ಮಾಡು ಅಂತಾರೆ. ನಾನೊಂದು ಹತ್ತು ಸುಳ್ಳು ಹೇಳಿ ಬಾಡಿಗೆ ಮನೆ ಹಿಡ್ದೆ.

ಮುಂದೆ ನಿಜ ಸಂಗತಿ ತಿಳಿದ್ರೆ?

ಭಯ ಇಲ್ಲ. ಒಮ್ಮೆ ಒಳಕ್ಕೆ ಸೇರಿದ ನಂತರ ಬಿಡಿಸೋದು ಸುಲಭ ಅಲ್ಲ.

(ಕೃಪೆ : ಆಕಾಶವಾಣಿ, ಬೆಂಗಳೂರು.)






"ನನಗೆ ಹಣಾ ಏನೂ ಬೇಡ. ದಿನಾ ಒಂದು ಘಂಟೆ ಕಾಫೀಗ್ ಹೋಗುಲ್ಲ ಅಂತ ಛಾಪ ಕೊಡು"

ನಕ್ಕಾಂಗಾ ಗಕ್ಕಾಂಗಾ

# ಕ್ರಾಂತಿಯ ಕೊಡುಗೆ

—ಶೀನೂ

---

ತಿರಕಪ್ಪ ನಮ್ಮ ಊರಿನ ನಗರಸಭೆಯ ಝಾಡಮಾಲಿ. ಎಂದರೆ ಬೀದಿ ಗುಡಿಸುವವ. ನಾನು ನನ್ನ ಕಾರ್ಯ ಕ್ಷೇತ್ರ ಅಥವಾ ಉದರ ಕ್ಷೇತ್ರವಾದ ಮುಂಬಯಿಯಿಂದ ಆಗೀಗ ಊರಿಗೆ ಬಂದು ಮನೆ ಬಾಗಿಲಿಗೆ ನಿಂತೊಡನೆಯೇ ಅದಾವ ಮಾಯೆಯಿಂದಲೋ ನನ್ನನ್ನು ನೋಡಿ, ಓಡಿ ಬಂದು, ತುಸು ದೂರದಲ್ಲಿ ಬಗ್ಗಿ ನಿಂತು, ಭಯ ಭಕ್ತಿಯಿಂದ ನಮಸ್ಕರಿಸಿ. "ಸ್ವಾಮೇರ....ಬುದ್ಧಿ....ರಾಯರೇ....ಧಣಿ.... ಒಡೆಯಾ" ಇತ್ಯಾದಿ ನಾಮ ಮಂತ್ರಗಳಿಂದ ನನ್ನ ಅಷ್ಟೋತ್ತರವನ್ನು ಪ್ರಾರಂಭಿಸುತ್ತಾನೆ. ಒಂದು ಕಾಲಕ್ಕೆ ಬಿಳಿದಾಗಿದ್ದಿರಬಹುದಾದ ತೊಡೆಯವರೆಗೆ ಏರಿಸಿದ ಧೋತರ, ಸಮವಸ್ತ್ರದ ನೀಲಿ ಬಣ್ಣದ ಶರಟು, ನೆರೆತ ತಲೆ, ನಿರಂತರ ತಂಬಾಕು ಚರ್ವಣದಿಂದ ಕೆಂಪು ಕೆಂಪಾದ ಬಾಯಿ, ಆ ಕೆಂಪಿಗೆ ಒಪ್ಪುವ ಕಪ್ಪು ಮುಖ, ಮುಖಕ್ಕೆ ಹೊಂದುವ ಪೆಚ್ಚು ಕಳೆ, ಹುಚ್ಚು ನಗೆ. ಇಂತಹ ತಿರಕಪ್ಪ ಬಲಗೈಯಲ್ಲಿನ ಉದ್ದನೆಯ ಪೊರಕೆಯನ್ನು ಎಡ ಕಂಕುಳಿಗೆ ಸೇರಿಸಿ ಶಿಸ್ತಿನ ಸೈನಿಕನಂತೆ ನನಗೆ ಬಲಗೈ ಸಲಾಮು ಹಾಕುವಾಗ, ನಾನು ಒಳಗಿಂದೊಳಗೆ ಹಿಗ್ಗಿ ಹಿಗ್ಗಿ ಬೀಗುತ್ತಿರುತ್ತೇನೆ.

ನನ್ನನ್ನು ಕಂಡರೆ ಆಗದ ಕೆಲ ಕುಹಕಿಗಳು ನಾನು ಪ್ರತಿ ಸಲಾಮಿಗೆ ತಿರಕಪ್ಪನಿಗೆ ಎರಡೆರಡು ರೂಪಾಯಿ ಕೊಡುತ್ತೇನೆಂದೂ ಮತ್ತೂ ಅವನು ಅದಕ್ಕಾಗಿಯೇ ಹಾಗೆ ನನಗೆ ಸಲಾಮು ಹಾಕುತ್ತಾನೆಂದೂ ಹೇಳುತ್ತಾರೆ. ಅದು ಸುಳ್ಳು. ತಿರಕಪ್ಪನಿಗೆ ನನ್ನ ಮೇಲೆ, ನಮ್ಮ ಮನೆತನದ ಮೇಲೆ ನಿಜಕ್ಕೂ ಭಯ ಭಕ್ತಿಗಳಿರುವುದರಿಂದಲೇ ಅವನು ನನಗೆ ಹಾಗೆ ಸಲಾಮು ಹಾಕುತ್ತಾನೆ. ಅಷ್ಟಲ್ಲದೆ ಇನ್ನೇನು?

ಅವನು ಹೀಗೆ ವಿನಮ್ರನಾಗಿ ನಮಸ್ಕರಿಸುತ್ತಿರುವಾಗ ಆ ಬೀದಿಯಲ್ಲಿ ಹೋಗುತ್ತಿರುವ ಪರಿಚಿತರೋ, ಅಥವಾ ಅದಕ್ಕೂ ಹೆಚ್ಚಾಗಿ ದಾಯಾದಿಗಳೋ, ಯಾರಾದರೂ ನೋಡಿ ಬಿಟ್ಟರಂತೂ ನನ್ನ ಹಿಗ್ಗಿಗೆ ಎಣೆಯೇ ಇಲ್ಲವಾಗುತ್ತದೆ. ಅಂತಹ ಸಂದರ್ಭಗಳಲ್ಲಿಒಮ್ಮೊಮ್ಮೆ ನಾನು ಅವನಿಗೆ ಐದು ರೂಪಾಯಿ ಕೂಡ ಕೊಟ್ಟದ್ದು ಇಲ್ಲವೆಂತಲ್ಲ.

ಊಳಿಗಮಾನ್ಯ ಪದ್ಧತಿ ಸಂಪೂರ್ಣವಾಗಿ ನಶಿಸಿ ಹೋಗುತ್ತಿರುವ ಈ ದಿನಗಳಲ್ಲಿ ನಮ್ಮಂತಹರಿಗೆ ಈ ರೀತಿ ಭಯ ಭಕ್ತಿಯನ್ನು ತೋರುವವರು ಈಗ ಯಾರಿದ್ದಾರೆ?

ಮುಂಬಯಿಯಲ್ಲಿ ಒಂದು ನರ ಪಿಳ್ಳೆ ಕೂಡ ನನ್ನನ್ನು "ನೀನೇ?" ಎಂದು ಕೇಳುವದಿಲ್ಲ. ಮುಂಬಯಿಯ ಮಾತು ಬಿಡಿ. ಅದೊಂದು ರಾಕ್ಷಸೀ ಪಟ್ಟಣ. ನಮ್ಮ ಚಿಕ್ಕ ಊರಿನಲ್ಲಿಯೇ ಇತ್ತೀಚೆಗೆ ಒಬ್ಬರನ್ನೊಬ್ಬರು ಕೇಳುವದಿಲ್ಲ. ಅಂತಹದರಲ್ಲಿ ತಿರಕಪ್ಪ ನನಗೆ ಹೀಗೆ ಬಗ್ಗಿ ಬಗ್ಗಿ ನಮಸ್ಕರಿಸುವಾಗ ನನ್ನ ಒಳಗಿನ "ಈಗೊಪ್ಪ" (Ego) ಹರ್ಷಾತಿರೇಕದಲ್ಲಿ ಜಿಗಿಯುತ್ತಿರುತ್ತಾನೆ.

ತಿರಕಪ್ಪನ ವಂದನೆಯಲ್ಲಿ ಅದಾವ ಮಾಯೆ ಇದೆಯೋ ಕಾಣೆ. ಅವನು ಒಂದು ಸಲಾಮು ಹಾಕಿದೊಡನೆಯೇ ತಲೆ ತಿನ್ನುವ ಚಿಂತೆ, ದುಗುಡ, ಉದ್ವೇಗಗಳೆಲ್ಲ ಮಾಯವಾಗಿ, ಎದೆಯು ತುಂಬೆಲ್ಲ ಸಂತಸವೇ ಸಂತಸ ಪಸರಿಸುತ್ತದೆ.

ಮೊನ್ನೆ ಕೂಡ ಹಾಗೇ ಆಯಿತು. ಮುಂಬಯಿಯಿಂದ ಬರುವಾಗ ಚಿಂತೆಗಳ ಹೊರೆಯನ್ನೇ ಹೊತ್ತು ತಂದಿದ್ದೆ. ಹಿರಿಯ ಮಗ ಪಿ.ಯು.ಸಿ. ಮುಗಿಸಿ ಇಂಜಿನಿಯರಿಂಗ್‌ಗೆ ಹೋಗಬೇಕೆನ್ನುತ್ತಿದ್ದಾನೆ. ಕ್ಯಾಪಿಟೇಶನ್ನು, ಫೀಸು, ಉಳಿದ ಖರ್ಚು ಎಲ್ಲಾ ಸೇರಿಸಿ ಏನಿಲ್ಲೆಂದರೂ 30 ಸಾವಿರವಾದರೂ ಬೇಕಾದೀತು. ಮಗಳಿಗೆ ಈ ವರ್ಷ ಗ್ರ್ಯಾಜುಯೇಶನ್ ಮುಗಿದೊಡನೆಯೇ ಮದುವೆ ಮಾಡಬೇಕು. ಅದಕ್ಕೆಷ್ಟು ತಗಲುತ್ತದೆಯೋ ದೇವನೇ ಬಲ್ಲ. 25 ವರ್ಷಗಳ ಸರ್ವಿಸ್ ಮುಗಿಯುತ್ತ ಬಂದಿದ್ದರೂ ನನ್ನ ಬಳಿ ಐದು ಸಾವಿರಕ್ಕೆ ದಿಕ್ಕಿಲ್ಲ. ಒಂದೇ, ಎರಡೇ, ನಾನಾ ತೆರನ ಚಿಂತೆಗಳು. ಊರಿಗೆ ಬಂದ ರಾತ್ರಿ ಎಲ್ಲ ಚಿಂತೆಯ ಚಾದರವನ್ನು ಹೊದ್ದುಕೊಂಡು ನಿದ್ದೆ ಇಲ್ಲದೇ ಕಳೆದೆ. ಯಥಾಪ್ರಕಾರ ಬೆಳಗ್ಗೆ ಬಾಗಿಲಿಗೆ ಬಂದೊಡನೆಯೇ ಅಂಗಳದಲ್ಲಿ ತಿರಕಪ್ಪ ಪ್ರತ್ಯಕ್ಷನಾದ. ಈ ಸಲ ಅವನ ಜತೆಗೆ ಅವನ ಹೆಂಡತಿ ತಿರಕವ್ವನೂ ಇದ್ದಳು. ಅಲ್ಲದೇ ಸುಮಾರು ೨೦-೨೧ರ ಒಬ್ಬ ಹುಡುಗ, ಪ್ಯಾಂಟ್ ಬುಶ್ ಶರಟು ಧರಿಸಿದವನೂ ಇದ್ದ.

ತಿರಕಪ್ಪ ಎಂದಿನಂತೆ ಮುಂದೆ ಬಂದು ಬಗ್ಗಿ ನಮಸ್ಕರಿಸಿದ. ನಾನು ಆಪ್ತತೆಯಿಂದ ತಲೆದೂಗಿ ಅವನ ವಂದನೆಯನ್ನು ಸ್ವೀಕರಿಸಿದೆ. ಮತ್ತೆ ನನ್ನದೇ ಯೋಚನೆಯಲ್ಲಿ ಮುಳುಗಿ ಅನ್ಯಮನಸ್ಕನಾದೆ. ಕ್ಷಣ ಬಿಟ್ಟು ಮನೆಯ ಒಳಗೆ

ಹೋಗುವೆನೆಂದು ಈಚೆ ತಿರುಗಿದಾಗ ತಿರಕಪ್ಪ ಇನ್ನೂ ಅಂಗಳದಲ್ಲಿ ನಿಂತೇ ಇದ್ದದ್ದನ್ನು ಕಂಡು,

"ಇನ್ನೇನು ತಿರಕಪ್ಪಾ?" ಎಂದು ಕೇಳಿದೆ.

ತಿರಕಪ್ಪ "ಹಿ....ಹಿ" ಎಂದ ಹುಚ್ಚು ನಗೆಯು ಪೀಠಿಕೆ ಹಾಕಿ, "ನನ್ನ ಹೇಣ್ತಿ:ರೀ" ಎಂದ. ತಿರಕವ್ವ ಒಂದು ಹೆಜ್ಜೆ ಮುಂದೆ ಬಂದು ನಮಸ್ಕರಿಸಿದಳು.

ತಿರಕಪ್ಪ ಮತ್ತೆ "ಹಿ....ಹಿ" ಎನ್ನುತ್ತ "ನಮ್ಮ ಮಗ ಧರಮ್ಯಾ ಯುವ್ವಾ" ಎಂದ. ನಾನು ಹುಡುಗನೆಡೆಗೆ ನೋಡಿದೆ. ಒಂದು ಬಿಳಿ ಪ್ಯಾಂಟು, ತಿಳಿ ಹಸಿರು ಬಣ್ಣದ ಶರಟು ತೊಟ್ಟು ಒಪ್ಪವಾಗಿ ಬೈತಲೆ ತೆಗೆದ, ತಿರಕಪ್ಪನದೇ ಮುಖದ ಕನಸುಗಣ್ಣಿನ ಹೊಸ ಹುಡುಗ ಮುಂದೆ ಬಂದು ಅಂಜುಂತ್ತಂಜುತ್ತ "ಗುಡ್ ಮಾರ್ನಿಂಗ್, ಸರ್" ಎಂದ.

ನಾನು ಸಂತೋಷಾತಿರೇಕದಲ್ಲಿ ಕಣ್ಣರಳಿಸಿ, "ಗುಡ್ ಮಾರ್ನಿಂಗ್, ಯಂಗ್ ಮ್ಯಾನ್" ಎಂದೆ. ತುಸು ದೂರದಲ್ಲಿ ಝಾಡಮಾಲಿ ದಂಪತಿಗಳು ತಮ್ಮ ಮಗನ ಇಂಗ್ಲಿಷ್ ಸಂಭಾಷಣೆಯನ್ನು ಹೆಮ್ಮೆಯಿಂದ ಕೇಳಿ ಹಿಗ್ಗುತ್ತಿದ್ದರು.

ಕ್ಷಣ ಬಿಟ್ಟು ತಿರಕಪ್ಪ "ಹೋದ ವರುಷ ಬಿ.ಕಾಂ. ಪಾಸ ಆಗ್ಯಾನ್ರಿ" ಎಂದು ನನಗೆ ಹೇಳಿ, ಹುಡುಗನಿಗೆ "ಕೊಡು ಸಾಹೇಬರಿಗೆ, ಕಾಗದಾ ಕೊಡು" ಎಂದ. ಅವನ ಮಗ "ಧರಮ್ಯಾ" ಮೊನ್ನೆ ಮೊನ್ನೆಯವರೆಗೆ ಸಿಂಬಳ ಸುರಿಸುತ್ತ, ಚಡ್ಡಿ, ಇಲ್ಲವೇ ಅಂಗಿ, ಹೀಗೆ ಏಕ ವಸ್ತ್ರಧಾರಿಯಾಗಿ, ಅಪ್ಪನ ಹಿಂದೆ ಮುಂದೆ ಸುತ್ತುತ್ತಾ, ನಮ್ಮ ಅಂಗಳದ ಮೂಲೆಯಲ್ಲಿ ಜೊಲ್ಲು ಸುರಿಸುತ್ತ ತಿಂಡಿ ತಿಂದು ಬೆಳೆದ ಹುಡುಗ, ಒಮ್ಮೆಲೇ ಪ್ರಬುದ್ಧನಾಗಿ ಎದೆ ಎತ್ತರಕ್ಕೆ ಬೆಳೆದು ನಿಂತು "ಬಿ.ಕಾಂ" ಪದವೀಧರ ನಾದದ್ದು ಕೇಳಿ ಆನಂದಾತಿರೇಕದಲ್ಲಿ ನನ್ನ ಕಣ್ಣು ತುಂಬಿ ಬಂದು, "ದೇವರು ಒಳ್ಳೆಯದು ಮಾಡಲೆಪ್ಪ, ಒಳ್ಳೆಯದು ಮಾಡಲಿ" ಎನ್ನುತ್ತ ಅವನು ನೀಡಿದ ಕಾಗದವನ್ನು ಕೈಗೆ ತೆಗೆದುಕೊಂಡು ನೋಡಿದೆ.

ಶ್ರೀ ಧರ್ಮೇಂದ್ರ ತಿರಕಪ್ಪ ಮೂಲಿಮನಿ, ಬಿ.ಕಾಂ., ಇವರಿಗೆ ಸರಕಾರದ ಯಾವದೋ ಖಾತೆಯಿಂದ ಕಾರಕೂನರ ಕಾದಿಟ್ಟ ಜಾಗೆಗೆ ಸಂದರ್ಶನಕ್ಕೆಂದು ಬಂದ ಕಾಗದವಾಗಿತ್ತದು. ನಾನು ಒಂದು ಕ್ಷಣ ದಿಗ್ಮೂಢನಾದೆ.

ಗಲಾಟೆಯೇ ಸದ್ದು ಗದ್ದಲವಿಲ್ಲದೇ, ತೋಪು ತುಪಾಕಿಗಳ ಆಟಾಟೋಪವಿಲ್ಲದೇ ನಮ್ಮ ನಿತ್ಯ ಜೀವನದಲ್ಲಿ ನಮಗೇ ತಿಳಿಯದಂತ ಬೆರೆತುಕೊಂಡು, ಉಗಮವೇ ಇಲ್ಲದ ನದಿಯೊಂದು ಒಮ್ಮೆಲೇ ಉದ್ಭೂತವಾದಂತೆ, ನಮ್ಮ ಸುತ್ತಲಿನ ಸಮಾಜ ಜೀವನದಲ್ಲಿ ಕ್ರಾಂತಿಯೊಂದು ಘಟಿಸಿ ಹೋಗಿತ್ತು, ಸಾವಿರಾರು ವರುಷಗಳಿಂದ ನಮ್ಮ ಊರಿನ ನಗರಸಭೆಯ ಝಾಡಮಾಲಿಯಾಗಿದ್ದ ತಿರಕಪ್ಪನ ಮಗ ಧರಮ್ಯಾ ಉರ್ಫ್ ಧರಮೇಂದ್ರ, ಈ ಕ್ರಾಂತಿಯ ಜ್ವಾಲೆಗಳನ್ನು ನುಂಗಿ ನೊಂದು, ಅಗ್ನಿಕುಂಡದಿಂದ ಎದ್ದು ಬಂದ ಯಜ್ಞ ಪುರುಷನಂತೆ ನನ್ನೆದುರು ತನ್ನ ಬಿ.ಕಾಂ. ಪದವಿ ಪತ್ರವನ್ನು ಯಾವದೋ ಸರಕಾರೀ ಕಚೇರಿಯ ಕಾದಿಟ್ಟ ಕಾರಕೂನರ ಜಾಗೆಗೆ ಬಂದ ಸಂದರ್ಶನದ ಸೂಚನೆಯನ್ನೂ ಹಿಡಿದುಕೊಂಡು ನಿಂತಿದ್ದ.

ನಾನು ಸಾನಂದಾಶ್ಚರ್ಯ ಮೂಡಿಸಿದ ಯಾವ ಯಾವದೋ ಭಾವನೆಗಳಿಗೆ ತುತ್ತಾಗಿ ಧರ್ಮೇಂದ್ರನಿಗೆ ಅವನ ಕಾಗದಗಳನ್ನು ಮರಳಿ ಕೊಡುತ್ತ, "ಇಂಟರ್‌ವ್ಯೂ ನಲ್ಲಿ ಚೆನ್ನಾಗಿ ಮಾಡಪ್ಪ. ದೇವರು ನಿನಗೆ ಒಳ್ಳೆಯದು ಮಾಡಲಿ'' ಎಂದೆ.

ತಿರಕಪ್ಪ ಮುಂದೆ ಬಂದು ಒಂದೀಟು ಮ್ಯಾಲಿನವರಿಗೆ ಹೇಳಿ, ಏನಾರ ಮಾಡಿ ಈ ಕೆಲಸಆಗೋ ಹಂಗ ಮಾಡಬೇಕರಿ" ಎಂದ.

ನಾನು ಊರು ಬಿಟ್ಟು ಮುಂಬಯಿ ಸೇರಿ 30 ವರುಷಗಳೇ ಸಂದಿದ್ದವು. ಈ ರಾಜ್ಯದಲ್ಲಿ ವಿಶೇಷ ಗುರುತು ಪರಿಚಯಗಳೂ, ಹೊಕ್ಕು ಬಳಕೆಯೂ ಇರಲಿಲ್ಲ. ಇದನ್ನೆಲ್ಲ ತಿರಕಪ್ಪನಿಗೆ ಹೇಗ ಹೇಳುವದೆಂದು,

"ಅದೆಲ್ಲ ಬೇಕಾಗಲಿಕ್ಕಿಲ್ಲ ತಿರಕಪ್ಪ. ಈಗ ಸರಕಾರದವರು ನಿಮ್ಮ ಜನಕ್ಕೇ ಅಂತ ಎಷ್ಟೋ ಸ್ಥಳಗಳನ್ನು ಮೀಸಲಾಗಿಟ್ಟಿರುತ್ತಾರಲ್ಲ" ಎಂದೆ.

ತಿರಕಪ್ಪ "ಮೀಸಲಿಟ್ಟಿದ್ದು ಖರೇ ಅಯಿತ್ರಿ; ಆದರs ಮೀಸಲಿಟ್ಟ ಜಾಗಾ ಕ್ಕಂತ ನಮ್ಮವರು ಭಾಳ ಮಂದಿ ಅದಾರ್ರಿ.. ಹೋದ ವರುಷನೂ ಹೀಂಗ ಆಗಿ ನಮ್ಮ ಹುಡಗ್ಗs ಸಿಗಲಿಲ್ಲರಿ. ಈ ವರುಷ ಹ್ಯಾಂಗಾರ ಮಾಡಿ ಹೊಂದಿಸಿಕೊಡ್ರಿ'' ಎಂದ ನನ್ನ ಅಸಹಾಯ ಮೌನವನ್ನು ಕಂಡು ತಿರಕಪ್ಪ ಮತ್ತೆ ಹೇಳತೊಡಗಿದ ಸಂಕೋಚದಲ್ಲಿ, ''ಹೀಂಗ ಮಂದಿ ಬಹಾಳ ಆಗಾಣs ಸಿಕ್ಕ ಹಂಗ ಕೇಳಾಕ ಸುರು

ಮಾಡ್ಯಾರ್ರಿ ಎಂದು ಕೈ ಕೈ ಹೊಸೆಯುತ್ತಿದ್ದಾಗ, ನಾನು ಗರ ಬಡಿದು "ಏನೂ" ಎಂದು ಅರಚಿದೆ.

ತಿರಕಪ್ಪ "ಹೋದ ವರುಷನs 25 ಸಾವಿರ ಕೇಳಾಕ ಹತ್ತಿದ್ರ್ರಿ. ಈ ವರುಷ ಇನ್ನೂ ಎಷ್ಟು ಏರಿರತಾರೋ ಶಿವನೇ ಬಲ್ಲ" ಎಂದ.

ನಾನು ಅಪನಂಬಿಕೆ, ಅಸಹನೆಗಳಿಂದ ಕೂಡಿದ ದನಿಯಲ್ಲಿ "ಅಲ್ರೀ ತಿರಕಪ್ಪ, ನಿಮಗೇ ಅಂತ ಮೀಸಲಿಟ್ಟ ಸ್ಥಳಗಳಿಗೆ ಕೂಡ ಮಾಮೂಲು ಕೇಳುತ್ತಾರೇನೋ?" ಎಂದೆ.

ತಿರಕಪ್ಪ, ಸಾಕಷ್ಟು ಜೀವನದ ಕಹಿಯುಂಡು, ಸತ್ಯವನ್ನು ಕಂಡವನು ಶಾಂತ ಸ್ವರದಲ್ಲಿ ಹೇಳಿದ. "ನಮಗಂತs 25 ಸಾವಿರ ಕೇಳತಾರ್ರಿ. ಮೇಲಿನ ಜಾತಿಯವರಿಗೆ 70, 75ರ ತನಕ ರೇಟು ಆಯ್ತ್ರಿ' ಎಂದ. ಮತ್ತೆ ತುಸು ತಡೆದು, "ಹಾಂಗೂ ಹೀಂಗೂ ಮಾಡಿ ಒದ್ದ್ಯಾಡಿ ಒದ್ದ್ಯಾಡಿ, ಒಂದು 20 ಸಾವಿರ ಕೂಡಿಸಿ ಇಟ್ಟೇನ್ರಿ. ಅಷ್ಟರ ಮ್ಯಾಲ ಹ್ಯಾಂಗಾರ ಮಾಡಿ ಹೊಂದಿಸಿಕೊಳ್ಳಾಕ ಹೇಳ್ರಿ" ಎಂದ.

* * *

ನನಗೆ ಒಮ್ಮೆಲೇ ನನ್ನ ಮಗನ ಇಂಜಿನಿಯರಿಂಗ್‌ಗೆ ಬೇಕಾದ 30 ಸಾವಿರ, ಮಗಳ ಮದುವೆಗೆ ಬೇಕಾಗಬಹುದಾದ ದೊಡ್ಡ ಮೊತ್ತ, ನನ್ನ 25 ವರುಷಗಳ ಸರ್ವಿಸಿನಲ್ಲಿ ಶೇಖರಿಸಿದ ಐದು ಸಾವಿರದ ಹಣ ಎಲ್ಲ ನೆನಪಾಗಿ, ಜೀವನದ ಅಗ್ನಿ ಪರೀಕ್ಷೆಯಲ್ಲಿ ತಿರಕಪ್ಪ ನನಗಿಂತ ಹೆಚ್ಚು ಅಂಕಗಳನ್ನು ಪಡೆದು ಶ್ರೇಷ್ಠ ದರ್ಜೆಯಲ್ಲಿ ಉತ್ತೀರ್ಣನಾದಂತೆನಿಸಿತು. ನಾನು ಪೆಚ್ಚು ಮೋರೆ ಹಾಕಿಕೊಂಡು ತಿರಕಪ್ಪನಿಗೊಂದು ಸಲಾಮು ಹೊಡೆದು ಮನೆಯ ಒಳಗೆ ನಡೆದೆ.







## ವಿದ್ಯುತ್-ಶಕ್ತಿ

—ಶಿವು

**ಪುರಾತನ ಚರಿತ್ರೆ :** ಇಂದ್ರನು ವಜ್ರಾಯುಧವನ್ನು ಝಳಪಿಸಿದಾಗಲೆಲ್ಲಾ ವಿದ್ಯುತ್ ಉತ್ಪನ್ನವಾಗುತ್ತಿದ್ದುದು ಸರ್ವವಿದಿತ. ದೇವಲೋಕದಲ್ಲಿ ಅಮೃತವನ್ನು ಕಾಯ್ದುಕೊಂಡಿದ್ದ(ರುವ) ಎರಡು ಸರ್ಪಗಳ ಹೆಸರು ವಿದ್ಯುಜ್ಜಿಹ್ವ ಎಂಬುದು ಅನೇಕರಿಗೆ ತಿಳಿಯದಿರಬಹುದು. ಅವುಗಳ ಸೀಳು ನಾಲಿಗೆಗಳಿಂದ ವಿದ್ಯುತ್ ಪ್ರವಾಹ ಹೊರಟು ಅಮೃತವನ್ನು ಕದಿಯ ಬಂದವರಿಗೆ ಷಾಕ್ ಟ್ರೀಟ್‌ಮೆಂಟ್ ಸಿಗುತ್ತಿದ್ದ ಸಂಗತಿ ಮಹಾಭಾರತದಲ್ಲಿ ಕಂಡು ಬರುತ್ತದೆ.

**ವಿದ್ಯುತ್ತಿನ ಜನಕ :** ಇಟಾಲಿಯನ್ ವಿಜ್ಞಾನಿ, ಲುಯಿಗಿ ಗಾಲ್ವಾನಿ 1790ರಲ್ಲಿ ಯಾವುದೋ ಪ್ರಯೋಗ ಮಾಡುತ್ತಿದ್ದಾಗ, ಪಕ್ಕದ ಮೇಜಿನ ಮೇಲಿದ್ದ ಸತ್ತ ಕಪ್ಪೆಯ ಕಾಲು ಅಲುಗಿತಂತೆ. ಅದರಿಂದ ಆತ ಸ್ಫೂರ್ತಿಗೊಂಡು ವಿದ್ಯುತ್ತನ್ನು ಕಂಡು ಹಿಡಿದನಂತೆ. ಗಾಲ್ವಾನಿಗೆ ಸಾವಿರಾರು ವರ್ಷಗಳ ಹಿಂದೆ ಜೀವಿಸಿದ್ದ ವ್ಯಾಸ ಮುನಿಗಳು ತಮ್ಮ ಮಹಾಭಾರತದಲ್ಲಿ ಬಳಸಿರುವ, ವಿದ್ಯುಲ್ಲತೆ, ವಿದ್ಯುನ್ಮಾಲಿ, ಮುಂತಾದ ಪದಗಳನ್ನು ನೋಡಿದರೆ, ಆಗಿನ ಕಾಲದಲ್ಲೇ ವಿದ್ಯುತ್ತಿನ ಬಗ್ಗೆ ಅರಿವು ಇದ್ದಿತೆಂಬುದು ಖಂಡಿತ.

**ಇತ್ತೀಚಿನ ಚರಿತ್ರೆ** ಶಿವನ ಸಮುದ್ರದಲ್ಲಿ ಪ್ರೊಟ್ಟ ಮೊದಲಿಗೆ ವಿದ್ಯುದುತ್ಪಾದನೆ ಪ್ರಾರಂಭವಾಯಿತು. ಈ ಬಗ್ಗೆ ತಾಂತ್ರಿಕ ಮಾಹಿತಿ ತಿಳಿಯಲು, ನಮ್ಮ ಫಿಸಿಕ್ಸ್ ಮೇಷ್ಟರು ಶಾಮರಾಯರನ್ನು ಕೇಳಿದೆವು. ಅವರು

"ಛ! ಛೇ! ಅಷ್ಟೂ ಗೊತ್ತಿಲ್ಲವೇನ್ರಿ! ಅಲ್ಲಿ ಗಗನಚುಕ್ಕಿ ಜಲಪಾತದ ಕೆಳಗೆ ಒಂದು ಚಕ್ರ ಇಟ್ಟಿರುತ್ತಾರೆ. ನೀರಿನ ರಭಸಕ್ಕೆ ಚಕ್ರ ತಿರುಗಿ ವಿದ್ಯುತ್ ಉತ್ಪಾದನೆ

[illegible]ಗುತ್ತವೆ. ಅವನ್ನ ದಂಗಿಗಳಲ್ಲಿ ಶೇಖರಿಸಿ ಎಲ್ಲ ಊರುಗಳಿಗೂ ರವಾನಿಸುತ್ತಾರೆ" ಅಂತ ಹೇಳಿದರು.

ವಿದ್ಯುತ್ ಉಪಕರಣಗಳನ್ನ ಒದ್ದೆ ಕೈನಲ್ಲಿ ಮುಟ್ಟಿದರೆ ಷಾಕ್ ಹೊಡೆಯುವುದು ನಮ್ಮ ಸ್ವಂತ ನೋವಿನ ಅನುಭವ. ಈ ನೀರಿನ ಕೆಳಗಡೆಯೋ ವಿದ್ಯುತ್ ಉತ್ಪಾದನೆಯಾದರೆ ಅಲ್ಲಿನ ಸಿಬ್ಬಂದಿಗೆಲ್ಲಾ ಷಾಕ್ ಹೊಡೆಯುವುದಿಲ್ಲವೇ ಎಂಬ ಪ್ರಶ್ನೆಗೆ ಉತ್ತರ ಹುಡುಕುತ್ತಿದ್ದೇವೆ.

**ವಿದ್ಯುತ್ ದೊರಕುವ ಸ್ಥಳ** ಕೆಲವು ವರ್ಷಗಳ ಹಿಂದೆ ಇದು ಕೆಇಬಿ ಎಂಬಲ್ಲಿ ದೊರಕುತ್ತಿತ್ತು. ಈಗಲೂ ಆಗಾಗ್ಗೆ ಈ ಸಂಸ್ಥೆ ವಿದ್ಯುತ್ ಸರಬರಾಜು ಮಾಡುತ್ತಿದೆ ಎಂಬ ಪ್ರತೀತಿ ಇದೆ. ದಿನಕ್ಕೆ ಹತ್ತು ಬಾರಿ ವಿದ್ಯುತ್ ಸರಬರಾಜು ನಿಲ್ಲುವ ಬಗ್ಗೆ ಕೆಇಬಿ ಅಧಿಕಾರಿಗಳನ್ನು ಕೇಳಿದಾಗ ಅವರು ಕೊಟ್ಟ ಎರಡು ಪದಗಳ ಉತ್ತರ "ಪವರ್ ಕಟ್"

**ವಿದ್ಯುತ್ತಿನ ವಿವಿಧ ವರ್ಗಗಳು :**

**ಜಲ ವಿದ್ಯುತ್** ಮಳೆ ಬಂದರೆ ದೀಪ ಹೋಗುವುದು ಎಲ್ಲರ ಅನುಭವ. ಜಲಕ್ಕೂ ವಿದ್ಯುತ್ತಿಗೂ ಇರುವ ಈ ನಿಕಟ ಸಂಬಂಧದ ದ್ಯೋತಕವಾಗಿ ಈ ವರ್ಗದ ವಿದ್ಯುತ್ತನ್ನು ಜಲ ವಿದ್ಯುತ್ ಅನ್ನುತ್ತಾರೆ.

**ಅಣು ವಿದ್ಯುತ್** ಅಣು ತೀರಾ ಸಣ್ಣ ವಸ್ತು. ಈಗಿನ ವಿದ್ಯುತ್ ಪೋತಾ ಹೀಗೇ ಮುಂದುವರಿದರೆ 21ನೇ ಶತಮಾನದ ಹೊತ್ತಿಗೆ, ಕೇವಲ ಅಣುವಿನ ಪ್ರಮಾಣದ ವಿದ್ಯುತ್ ದೊರಕಬಹುದು. ಮುಂಬರುವ ವಿದ್ಯುತ್ ಕ್ಷಾಮದ ಸೂಚಕ "ಅಣು ವಿದ್ಯುತ್"

**ಸಾಹಿತ್ಯದಲ್ಲಿ ವಿದ್ಯುತ್ತಿನ ಉಲ್ಲೇಖ :** ಪ್ರಣಯ ಕಾದಂಬರಿಗಳಲ್ಲಿ ಮುಖ್ಯವಾಗಿ ವಿದ್ಯುತ್ತಿನ ಉಲ್ಲೇಖವನ್ನು ಕಾಣಬಹುದು. ನಾಯಕಿ ಪಾರ್ಕಿನ ಬೆಂಚಿನ ಮೇಲೆ ಕುಳಿತಿರುತ್ತಾಳೆ. ನಾಯಕ ಮರದ ಹಿಂದಿನಿಂದ ಬಂದು ನಾಯಕಿಯ ಪಕ್ಕದಲ್ಲಿ ಕೂರುತ್ತಾನೆ. ಪ್ರೇಮಾಲಾಪ ಆರಂಭವಾಗುತ್ತದೆ. ಮಾತುಕತೆಗಳ ಮಧ್ಯೆ ಅಕಸ್ಮಾತ್ ನಾಯಕನ ಕೈ ನಾಯಕಿಯ ಕೈ ಬೆರಳನ್ನು ಸೋಕುತ್ತದೆ. ಆಗ "ರಾಗಿಣಿಗೆ ಮೈಯಲ್ಲೆಲ್ಲಾ ವಿದ್ಯುತ್ ಸಂಚಾರವಾದಂತಾಯಿತು" ಎಂದ ವಾಕ್ಯ ಕಾಣ ಸಿಗುತ್ತವೆ.

ಪ್ಯಾಯಣ್ಗೆ ವಿದ್ಯುತ್ ಸಂಚಾರವಾದರೆ ಜ್ಞಾನ ತಪ್ಪುತ್ತದೆ ಎಂದು ಶರೀರ ಶಾಸ್ತ್ರ ಹೇಳುತ್ತದೆ. ಜ್ಞಾನ ಸರಿಯಾಗಿದ್ದರೆ ಆ ಕೆಲಸವಿಲ್ಲದ ಬಡಗಿ ಹತ್ತಿರ ರಾಗಿಣಿ ಏಕೆ ಚೆಲ್ಲಾಟ ಆಡುತ್ತಿದ್ದಳು ಅಂತ ನಾವೇ ಸಮಾಧಾನ ಮಾಡಿಕೊಂಡೆವು.

**ವಿದ್ಯುತ್ ಅನ್ನು ಪಡೆಯುವ ಬಗೆ :** ಈ ಬಗ್ಗೆ ಮಾಹಿತಿ ಪಡೆಯಲು, ಹೊಸದಾಗಿ ಮನೆ ಕಟ್ಟಿಸಿದ ಮಿತ್ರರೊಬ್ಬರನ್ನು ಸಂದರ್ಶಿಸಿದೆವು. ಅವರ ಹೇಳಿಕೆ :

“ಭಗೀರಥ ಗಂಗೇನ ಭೂಮಿಗೆ ತರಿಸಿದ್ದು ಈಗ ಅಷ್ಟೇನೂ ಕಷ್ಟವಾಗಿ ಕಾಣೋಲ್ಲ. ಯಾವ ಕಂಟ್ರ್ಯಾಕ್ಟರ್ ಹತ್ರಾನೂ ಅವನು ಹೆಣಗಬೇಕಾಗಿರಲಿಲ್ಲವಲ್ಲ. ಮನೆ ಕಟ್ಟಿಸೋಕ್ಕೆ ಆರು ತಿಂಗಳಾದ್ರೆ, ಕನೆಕ್ಷನ್‌ಗೆ ಮೂರು ತಿಂಗಳು”.

**ವಿದ್ಯುತ್ತಿನ ಉಪಯೋಗಗಳು :**

೧. ನವರಾತ್ರಿ ಬೊಂಬೆ ಕೂರಿಸಿದಾಗ ಬಣ್ಣ ಬಣ್ಣದ ದೀಪಗಳಿಗೆ ವಿದ್ಯುತ್ ಅಗತ್ಯ.

೨. ವಿದ್ಯುತ್ ಕುರ್ಚಿಗೆ ವಿದ್ಯುತ್ ಬೇಕೇ ಬೇಕು.

೩. ನೀವು ಕೆಇಬಿ ಅಧಿಕಾರಿಯಾಗಿದ್ದು, ಮನೆ ಕಟ್ಟಿಸ ಬೇಕಾದರೆ, ನಿಮ್ಮ ವಿದ್ಯುತ್-ವ್ಯವಹಾರ ಉಪಯೋಗಕ್ಕೆ ಬರುತ್ತದೆ.

೪. ಜೇಬಿನಲ್ಲಿ ಬ್ಯಾಟರಿ ಇಟ್ಟುಕೊಂಡು, ಶರಟಿನ ಮೂಲಕ ಒಂದು ಸಣ್ಣ ತಂತಿಯನ್ನು ಬೆರಳ ತುದಿಗೆ ಅಳವಡಿಸಿಕೊಂಡಿದ್ದರೆ, ನೀವು ನಿಮ್ಮ ಮನದನ್ನೆಯನ್ನು ಮುಟ್ಟಿದಾಗಲೆಲ್ಲಾ ವಿದ್ಯುತ್ ಸಂಚಾರ ಮಾಡಿಸಬಹುದು.

೫. ವಿದ್ಯುತ್ ಇಲಾಖೆಯ ಸಿಬ್ಬಂದಿಗಳಿಗೆ ಜೀವನೋಪಾಯ.

೬. ನತ್ತ ಕಪ್ಪೆಯ ಕಾಲು ಅಲುಗಿಸಬೇಕಾದರೆ ವಿದ್ಯುತ್ ಅಗತ್ಯ.



